### ವಿಪಶ್ಚನ್ಮಣಿ ಶ್ರೀಮದಯ್ಯಣ್ಣದೀಕ್ಷಿತವಿರಚಿತ

# ವ್ಯಾಸತಾತ್ಪರ್ಯನಿರ್ಣಯ

ಶ್ರೀಶಾಕೃತೀಂದುಮುಕುಟಾಕೃತಿ ಚೋಪಸೇವ್ಯ-
ವಿಶಾತ್ಮಕಂ ತದುಪಸೇವಿತೃಜೀವರೂಪಂ ।
ವಿಶ್ವಾತ್ಮಕಂ ತದುಪಭೋಗಪದಂ ಯದೀಡೇ
ತದ್ಬ್ರಹ್ಮ ಸತ್ಯಸುಖಬೋಧನಿಜಸ್ವರೂಪಂ ॥ ೧ ॥

ಇದು ಗ್ರಂಥಕಾರರ ಮಂಗಳಪದ್ಯ. ಅಖಂಡಾದ್ವಿತೀಯಸಚ್ಚಿದಾನಂದ ಸ್ವರೂಪದ ಪರಬ್ರಹ್ಮವೇ ಪಾರಮಾರ್ಥಿಕತತ್ತ್ವವು. ಈ ಪರಬ್ರಹ್ಮವು ಮಾಯೋಪಾಧಿಯ ವಶದಿಂದ ಶ್ರೀಲಕ್ಷ್ಮೀಪತಿಯಾದ ವಿಷ್ಣುರೂಪವೂ, ಶ್ರೀಚಂದ್ರಶೇಖರಪರಶಿವಸ್ವರೂಪವೂ ಆಗಿರುತ್ತದೆ. ಇಹಪರಗಳ ಶ್ರೇಯೋಭ್ಯುದಯಗಳ ಸಿದ್ಧಿಗೆ ಪರಮೇಶ್ವರನ ಈ ರೂಪಗಳು ಸೇವ್ಯಗಳಾಗಿವೆ. ಪರತತ್ತ್ವವಾದ ಪರಬ್ರಹ್ಮವು, ಇವುಗಳನ್ನು ಸೇವಿಸುವ ಜೀವರ ಮತ್ತು ಈ ಜೀವರಿಗೆ ಭೋಗಕ್ಕೆ ಸಾಧನವಾಗಿರುವ ದ್ವೈತಜಗತ್ತಿನ ವಾಸ್ತವಸ್ವರೂಪವೂ ಆಗಿರುತ್ತದೆ. ಇಂಥ ಪರಬ್ರಹ್ಮಪರತತ್ತ್ವವನ್ನು ಸ್ತುತಿಸಿ ಸೇವಿಸುತ್ತೇನೆ.

ಯದ್ವೀಕ್ಷಾಖಿಲಲೋಕಕಿಲ್ಬಿಷತಮಸ್ಕಾಂಡಸ್ಯ ಚಂಡದ್ಯುತಿಃ
ಸೂಕ್ತಿರ್ಯಸ್ಯ ವಿರಕ್ತಿಭಕ್ತಿಭಗವದ್ಬೋಧಪ್ರರೋಹಾವನಿಃ ।
ಬ್ರಹ್ಮಾನಂದಸುಧಾಬ್ಧಿಮಂಥನಗಿರಿರ್ಯಸ್ಯೋಪದೇಶಕ್ರಮಃ
ತಸ್ಮೈ ಶ್ರೀಧರವೇಂಕಟೇಶಗುರವೇ ಕುರ್ವೇ ಪ್ರಣಾಮಾಯುತಂ ॥ ೨ ॥

ಇದು ಗುರುನಮಸ್ಕಾರರೂಪವಾದ ಮಂಗಳಾಚರಣೆಯು. ಶ್ರೇಯಃ-ಪ್ರಾಪ್ತಿಗೆ ಪರಮಾತ್ಮಭಕ್ತಿಯಂತೆ ಶ್ರೀಗುರುಭಕ್ತಿಯೂ ಅವಶ್ಯವಾದುದು.

ಶ್ರೀಧರವೆಂಕಟೇಶಗುರುಗಳ ಕೃಪಾದೃಷ್ಟಿಯು, ಇವರ ಭಕ್ತರ ಪಾಪವೆಂಬ ಗಾಢವಾದ ಕತ್ತಲೆಗೆ ತೀಕ್ಷ್ಣಕಿರಣನಾದ ಸೂರ್ಯನಂತೆ ನಾಶಮಾಡುವಂಥದ್ದು; ಇವರ ಉಪದೇಶದ ಮಾತುಗಳು ಶ್ರೇಯಸ್ಕರಗಳಾದ ವೈರಾಗ್ಯ, ಭಗವದ್ಭಕ್ತಿ, ಸಮ್ಯಗ್ಜ್ಞಾನ-ಇವುಗಳನ್ನು, ಹುಲುಸಾಗಿ ಬೆಳೆಸುವ ಉತ್ತಮ ಕ್ಷೇತ್ರವು; ಇವರು ಉಪದೇಶ ಮಾಡುವ ರೀತಿಯು ಬ್ರಹ್ಮಾನಂದವೆಂಬ

ಅಪಾರವೂ ಅಗಾಧವೂ ಆಗಿರುವ ಸಮುದ್ರವನ್ನು ಕಡೆದು, ಅದರ ಅಮೃತ ರಸವನ್ನು ನೀಡುವ ಮಂದರಪರ್ವತವು. ಇಂಥ ಮಹಿಮಾಶಾಲಿಗಳಾಗಿರುವ ಶ್ರೀಗುರುವರ್ಯರಿಗೆ ನಿರಂತರವೂ ಸಹಸ್ರಾರುಪ್ರಣಾಮಗಳನ್ನು ಅರ್ಪಿಸು ತ್ತೇನೆ.

ಶ್ರೀವೇಂಕಟಪತೇಃ ಸೂನುರಲ್ಯಪ್ರೇರನುಜಃ ಕವಿಃ ।
ಅಯ್ಯಣ್ಣದೀಕ್ಷಿತಃ ಕುರ್ವೇ ವ್ಯಾಸತಾತ್ಪರ್ಯನಿರ್ಣಯಂ ॥ ೩ ॥

ಇಲ್ಲಿ ತಮ್ಮ ಪರಿಚಯವನ್ನೂ, ತಾವು ರಚಿಸುವ ಗ್ರಂಥದ ಪರಿಚಯ ವನ್ನೂ ಮಾಡಿಕೊಡುತ್ತಾರೆ.

ಈ ಗ್ರಂಥಕರ್ತೃಗಳು ಅಯ್ಯಣ್ಣದೀಕ್ಷಿತರೆಂದು ಪ್ರಸಿದ್ಧರಾದ ಕವಿಗಳು —ಎಂದರೆ ವಿದ್ವಾಂಸರು. ಇವರು ವೇಂಕಟಪತಿಗಳ ಮಕ್ಕಳೂ, ಅಲ್ಯದ್ರಿಗಳ ತಮ್ಮಂದಿರೂ ಆಗಿರುವರು. ಇವರು, ಶ್ರೀಬಾದರಾಯಣವ್ಯಾಸಮಹರ್ಷಿಗಳು ರಚಿಸಿರುವ ಶ್ರೀಬ್ರಹ್ಮಸೂತ್ರಗಳ ನಿಶ್ಚಿತವಾದ ತಾತ್ಪರ್ಯವನ್ನು ನಿರ್ಣಯಿಸಿ ತೋರಿಸುವಂಥ 'ವ್ಯಾಸತಾತ್ಪರ್ಯನಿರ್ಣಯ'ವೆಂಬ ಗ್ರಂಥರತ್ನವನ್ನು ರಚಿಸಿ ರುತ್ತಾರೆ.

ಪಕ್ಷಪಾತವಿನಿರ್ಮುಕ್ತೈರ್ವೈದಿಕೈರ್ಲೌಕಿಕೈರಪಿ ।
ತತ್ತ್ವಜಿಜ್ಞಾಸುಭಿಸ್ತತ್ತ್ವಮಸ್ಮಿನ್ಗ್ರಂಥೇಽವಧಾರ್ಯತಾಂ ॥ ೪ ॥

ತಮ್ಮ ಗ್ರಂಥದ ಹಿರಿಮೆಯನ್ನು ಎತ್ತಿ ತಿಳಿಸುತ್ತಾರೆ—ವೈದಿಕರೇ ಆಗಲಿ, ಲೌಕಿಕರೇ ಆಗಲಿ, ಸರ್ವರಿಗೂ ಶ್ರೇಯಸ್ಕರವಾಗಿರುವ ಪಾರಮಾರ್ಥಿಕತತ್ತ್ವ ವನ್ನು, ಪಕ್ಷಪಾತ-ದುರಭಿಮಾನಗಳಿಲ್ಲದೆ, ಯಥಾರ್ಥವಾಗಿ ತಿಳಿಯಬೇಕೆಂದು ಬಯಸುವವರು, ಅಂಥ ತತ್ತ್ವವನ್ನು ಈ ಗ್ರಂಥದಿಂದ ಸ್ಪಷ್ಟವಾಗಿ ತಿಳಿಯ ಲಾಗುವುದು.

ಈ ಪ್ರಕಾರವಾಗಿ ತಿಳಿಸಿ, ಈಗ ಗ್ರಂಥವನ್ನು ಆರಂಭಿಸುತ್ತಾರೆ.

ಭಗವಾನ್ ಶ್ರೀಮನ್ನಾರಾಯಣನು ಪರಮದಯೆಯಿಂದ ಲೋಕ ವನ್ನು ಅನುಗ್ರಹಿಸುವುದಕ್ಕಾಗಿ ಭಗವದ್ವ್ಯಾಸಮಹರ್ಷಿಗಳ ರೂಪದಿಂದ ಅವತರಿಸಿದನು. "ಎಲ್ಲ ಉಪನಿಷತ್ತುಗಳ ಪರಮತಾತ್ಪರ್ಯಾರ್ಥವೇ ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾದದ್ದು; ಆದರೆ, ಪರಸ್ಪರ

ವಿರುದ್ಧಾರ್ಥಗಳಾಗಿ ತೋರಿಬರುತ್ತಿರುವ ಈ ಉಪನಿಷತ್ತುಗಳ ಅರ್ಥವನ್ನು ಮಂದಮತಿಗಳಾಗಿರುವ ಜನರು ಹೇಗೆ ತಿಳಿಯಲಾದಾರು"—ಎಂದು ಪರಿಭಾವಿಸಿ ಶ್ರೀವ್ಯಾಸರು ಇದನ್ನು ನಿರ್ಣಯಿಸಿ ತೋರಿಸುವುದಕ್ಕಾಗಿ-"ಅಥಾತೋ ಬ್ರಹ್ಮಜಿಜ್ಞಾಸಾ"-ಎಂದು ಆರಂಭವಾಗಿ-"ಅನಾವೃತ್ತಿಃ ಶಬ್ದಾತ್"-ಎಂಬವರೆಗಿನ ಬ್ರಹ್ಮಸೂತ್ರಗಳನ್ನು ರಚಿಸಿದರು

ಶ್ರೀಶಿವಪುರಾಣದ ಏಕಾದಶರುದ್ರಸಂಹಿತೆಯಲ್ಲಿ ಈ ವಿಷಯವನ್ನು ಹೇಳಿದೆ—

"ಶ್ರೀಮನ್ನಾರಾಯಣನ ಅಂಶರಾದ ಭಗವದ್ಬಾದರಾಯಣವ್ಯಾಸರು, ಮಂದಮತಿಗಳಾದ ಜನರನ್ನು ಕಂಡು,—"ವೇದಾಂತಗಳ ಅರ್ಥವು ಇವರುಗಳಿಗೆ ಅನೇಕವಿಧವಾಗಿ ತೋರಿಬರುತ್ತಿದೆಯೇ ಹೊರತು, ನಿಶ್ಚಿತವಾಗಿ ತಿಳಿದುಬರುತ್ತಿಲ್ಲ; ಹೀಗಿರುವಲ್ಲಿ ಇವರು ಬ್ರಹ್ಮತತ್ತ್ವವನ್ನು ಯಥಾವತ್ತಾಗಿ ಹೇಗೆ ತಿಳಿದಾರು?"—ಎಂದು ಪರ್ಯಾಲೋಚಿಸಿ, ಶ್ರೀಪರಮೇಶ್ವರನ ಆಜ್ಞೆಯನ್ನು ಪಡೆದು, ವೇದಾಂತಾರ್ಥವನ್ನು ಸೂತ್ರರೂಪವಾಗಿ ರಚಿಸಿದರು"—ಎಂದು.

ಹೀಗೆ ವ್ಯಾಸರು ರಚಿಸಿರುವ ಬ್ರಹ್ಮಸೂತ್ರಗಳು ಅತ್ಯಂತಸಂಕ್ಷಿಪ್ತಗಳಾದ್ದರಿಂದ, ಇವುಗಳ ಅರ್ಥವನ್ನು ವಿವರಿಸುವುದಕ್ಕೆಂದು ಭಗವತ್ಪಾದರು, ಭಟ್ಟಭಾಸ್ಕರರು, ಶ್ರೀಕಂಠಾಚಾರ್ಯರು, ಯಾದವಪ್ರಕಾಶರು, ರಾಮಾನುಜರು, ಮಧ್ವರು, ಚಿತ್ಪ್ರಕಾಶರು, ವಲ್ಲಭರು—ಇವರೇ ಮೊದಲಾದ ಹಲವು ಜನ ಭಾಷ್ಯಕಾರರು ಈ ಸೂತ್ರಗಳಿಗೆ ಭಾಷ್ಯಗಳನ್ನು ಬರೆದಿರುತ್ತಾರೆ.

ಇವರಲ್ಲಿ—ಜೀವಬ್ರಹ್ಮರ ಅಭೇದವೇ ಸ್ವಾಭಾವಿಕ ಮತ್ತು ಪಾರಮಾರ್ಥಿಕವಾದುದು; ಭೇದವು ಔಪಾಧಿಕವೂ ಅಪರಮಾರ್ಥವೂ ಆಗಿದೆ—ಎಂಬುದು ಭಗವತ್ಪಾದರ ಅಭಿಪ್ರಾಯವಾಗಿದೆ;

ಜೀವಬ್ರಹ್ಮರ ಅಭೇದವು ಸ್ವಾಭಾವಿಕವೂ ಪಾರಮಾರ್ಥಿಕವೂ ಆಗಿ, ಭೇದವು ಔಪಾಧಿಕವಾದರೂ ಪಾರಮಾರ್ಥಿಕವು—ಎಂಬುದು ಭಟ್ಟಭಾಸ್ಕರರ ಮತವು;

ಯಾದವಪ್ರಕಾಶರ ಮತದಲ್ಲಿ—ಜೀವಬ್ರಹ್ಮರ ಭೇದ ಮತ್ತು ಅಭೇದ—ಇವೆರಡೂ ಸ್ವಾಭಾವಿಕವೆಂದು ಹೇಳಲ್ಪಟ್ಟಿದೆ;

ಶ್ರೀಕಂಠಾಚಾರ್ಯರು ಮತ್ತು ರಾಮಾನುಜಾಚಾರ್ಯರು ಇವರುಗಳಿಗೆ—ಜೀವಬ್ರಹ್ಮರ ಭೇದಾಭೇದಗಳೆರಡೂ ಸ್ವಾಭಾವಿಕಗಳೆಂದೂ ವಿಶಿಷ್ಟಾ

ದ್ವೈತವೆಂದೂ ಅಭಿಮತವಾಗಿದೆ; ಆದರೂ [illegible]ಗಳು ಈ ಎರಡು ಮತಗಳಲ್ಲಿ ವಿರೋಧವು;

ಜೀವಬ್ರಹ್ಮರ ಭೇದವು ಸ್ವಾಭಾವಿಕವೆಂಬುದು ಮಧ್ವಾಚಾರ್ಯರಿಗೆ ಸಮ್ಮತವು.

ಈ ಪ್ರಕಾರವಾಗಿ ಈ ಭಾಷ್ಯಕಾರರ ವ್ಯಾಖ್ಯಾನಗಳು, ಪರಸ್ಪರ ವಿರುದ್ಧಾರ್ಥಗಳಾಗಿವೆ. ವೇದಾಂತಗಳ ನಿಶ್ಚಿತವಾದ ತಾತ್ಪರ್ಯಾರ್ಥವೇ ಶ್ರೇಯಸ್ಕರವಾದುದು. ಆದಕಾರಣ ವೇದಾಂತಗಳ ತಾತ್ಪರ್ಯಾರ್ಥವನ್ನು ಅವಶ್ಯವಾಗಿ ನಿರ್ಣಯಿಸಿಕೊಳ್ಳಬೇಕಾಗಿದೆ. ಇದನ್ನೇ ಸ್ಕಾಂದಪುರಾಣವು ಹೀಗೆ ತಿಳಿಸುತ್ತದೆ—

"ಎಲೈ ಬ್ರಾಹ್ಮಣರೆ, ವೈದಿಕಸಿದ್ಧಾಂತವನ್ನು ಪ್ರಯತ್ನಪೂರ್ವಕವಾಗಿ ಯಾದರೂ ಸ್ಥಾಪಿಸಿಕೊಳ್ಳಿರಿ; ಹೀಗಾದರೇನೆ ಶ್ರೇಯೋಲಾಭವಾಗುವುದು; ಇಲ್ಲವಾದರೆ ಪಾಪಿಗಳಾಗುವಿರಿ"—ಎಂದು.

ಹೀಗೆ, ವೇದಾಂತಗಳ ಪರಮತಾತ್ಪರ್ಯಾರ್ಥವನ್ನು ಅವಶ್ಯವಾಗಿ ನಿರ್ಣಯಿಸಿಕೊಳ್ಳಬೇಕಾಗಿದೆ; ಇದರ ನಿರ್ಣಯಕ್ಕಾಗಿಯೇ ಶ್ರೀಬಾದರಾಯಣ ವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ; ಈ ಸೂತ್ರಗಳನ್ನು ವಿವರಿಸಲು ಪ್ರಯತ್ನಿಸಿರುವ ಈ ಭಾಷ್ಯಕಾರರುಗಳು ಮೇಲೆ ಹೇಳಿದಂತೆ ಪರಸ್ಪರವಿರುದ್ಧವಾಗಿ ಅರ್ಥವನ್ನು ಪ್ರತಿಪಾದಿಸಿರುವಲ್ಲಿ—"ಇವುಗಳಲ್ಲಿ ವಾಸ್ತವವಾದ ಅರ್ಥವು ಯಾವುದು?"—ಎಂಬುದು ವಿಚಾರ್ಯವಾಗಿರುತ್ತದೆ.

"ತತ್ತ್ವಪ್ರತಿಪಾದನೆಗಾಗಿ ಶ್ರೀಪರಮೇಶ್ವರನೇ ನಾಲ್ಕು ಜನ ಶಿಷ್ಯರೊಡನೆ ಅವತರಿಸುವನು"—ಎಂದು ಮುಂತಾದ ಪುರಾಣವಚನಗಳಿಂದ ಭಗವತ್ಪಾದರು ಪರಮೇಶ್ವರನ ಅವತಾರರೆಂದು ತಿಳಿದು ಬರುವುದರಿಂದಲೂ; "ಸೂತಸಂಹಿತೆಯನ್ನು ಹದಿನೆಂಟು ಬಾರಿ ವಿಮರ್ಶಿಸಿ ಬ್ರಹ್ಮಸೂತ್ರಭಾಷ್ಯವನ್ನು ಅವರು ರಚಿಸಿದರು"—ಎಂಬ ವಚನದಿಂದಲೂ ಭಗವತ್ಪಾದರ ಸಿದ್ಧಾಂತವೇ ಯಥಾರ್ಥವೆಂದು ತಿಳಿದುಬರುವುದಲ್ಲವೆ?"—ಎಂದರೆ;

ಹೌದು; ಆದರೆ—

"ಆದಿಶೇಷನ ಮೊದಲನೆಯ ಅವತಾರ ಅನಂತನು; ಎರಡನೆಯವನು ಲಕ್ಷ್ಮಣನು; ಬಲರಾಮ ಮೂರನೆಯವನು; ಕಲಿಯುಗದಲ್ಲಿ ರಾಮಾನುಜನು" —ಎಂಬ ಮಾತಿನಿಂದ ರಾಮಾನುಜಾಚಾರ್ಯರು ಆದಿಶೇಷನ ಅವತಾರರು-

ಎಂದು ತಿಳಿದುಬರುವುದು; ಮತ್ತು "ಭಗವದ್ಬೋಧಾಯನರು ವಿಸ್ತಾರವಾಗಿ ಬರೆದಿದ್ದ ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ಅನುಸರಿಸಿ ನಾವು ವ್ಯಾಖ್ಯಾನ ಮಾಡುತ್ತೇವೆ"—ಎಂಬ ರಾಮಾನುಜರ ಮಾತಿನಿಂದ ಅವರ ಭಾಷ್ಯಕ್ಕೆ ಬೋಧಾಯನರ ವೃತ್ತಿಯು ಮೂಲವಾಗಿದೆಯೆಂದೂ ತಿಳಿದುಬರುವುದರಿಂದ, ರಾಮಾನುಜರು ವಿವರಿಸಿರುವ ಅರ್ಥವೇ ಯಥಾರ್ಥವೆಂದೂ ಕಂಡುಬರುತ್ತದೆ;

ಇದರಂತೆಯೇ—

"ಭಗವಂತನ ಕಾರ್ಯದಲ್ಲಿ ನೆರವಾದವರಲ್ಲಿ ಹನುಮಂತನು ಮೊದಲನೆಯವನು; ಭೀಮಸೇನನು ಎರಡನೆಯವನು; ಪೂರ್ಣಪ್ರಜ್ಞರು ಮೂರನೆಯವರು"—ಎಂಬ ಮಾತಿನಂತೆ ಮಧ್ವರು ವಾಯುವಿನ ಅವತಾರರೆಂದೂ; ಅವರ ಮತಕ್ಕೆ, ಅವರ ಮತದಲ್ಲಿ ಪ್ರಸಿದ್ಧಗಳಾಗಿರುವ ಬ್ರಹ್ಮತರ್ಕ-ಮೂಲ-ರಾಮಾಯಣ—ಮುಂತಾದವುಗಳು ಮೂಲಗಳೆಂದೂ ತಿಳಿದುಬರುವುದರಿಂದ ಮಧ್ವರ ಅಭಿಮತವೂ ಯಥಾರ್ಥವೆಂದೂ ಕಂಡುಬರುತ್ತದೆ;

ಹೀಗೆಯೇ—ಭಟ್ಟಭಾಸ್ಕರ, ಯಾದವಪ್ರಕಾಶ, ಶ್ರೀಕಂಠ—ಮುಂತಾದವರ ಅಭಿಪ್ರಾಯಗಳೂ ಯಥಾರ್ಥಗಳೆಂಬುದು ಅವರವರ ಮತಗಳಲ್ಲಿ ಪ್ರಸಿದ್ಧಗಳಾದ ಮಾತುಗಳಿಂದ ತಿಳಿದುಬರುತ್ತದೆ;

"ಹೀಗಾದರೆ, ಇವುಗಳಲ್ಲಿ ತತ್ತ್ವದ ನಿರ್ಣಯವು ಹೇಗೆ ಸಾಧ್ಯ?" ಎಂದರೆ, ಇಲ್ಲಿ ಹೀಗೆ ವಿಚಾರಮಾಡತಕ್ಕದ್ದು—

ಈ ಮತಗಳು ಒಂದಕ್ಕೊಂದು ವಿರುದ್ಧಾರ್ಥಗಳಾಗಿರುವುದು ಸ್ಪಷ್ಟವೇ ಇದೆ. ಇವೆಲ್ಲವನ್ನೂ ಸಮವಾಗಿಯೇ ಪ್ರಮಾಣಗಳೆಂದು ಒಪ್ಪಲಾಗುವುದಿಲ್ಲ. ಇವೆಲ್ಲವನ್ನೂ ಅಪ್ರಮಾಣವೆಂದು ಹೇಳುವುದೂ ಆಗದು; ತತ್ತ್ವವು ಇವುಗಳಲ್ಲಿ ಯಾವುದೋ ಒಂದು ಆಗಲೇಬೇಕು—ಇವುಗಳನ್ನು ಬಿಟ್ಟು ಬೇರೆ ಇರುವಂತಿಲ್ಲ. 'ಅದು ಯಾವುದು'—ಎಂಬುದನ್ನು ನಿಶ್ಚಯಿಸುವುದು ಹೇಗೆ?

ಹೀಗೆ ಮಾಡೋಣ—"ಇವರುಗಳ ಭಾಷ್ಯಗಳನ್ನೆಲ್ಲ ಇಟ್ಟುಕೊಂಡು, ಪೂರ್ವಮೀಮಾಂಸೆಯಲ್ಲಿ ತಾತ್ಪರ್ಯನಿರ್ಣಯಕ್ಕೆ ಹೇಳಿರುವ ಉಪಕ್ರಮೋಪಸಂಹಾರ—ಮೊದಲಾದ ನ್ಯಾಯಗಳಿಂದ ಪರೀಕ್ಷಿಸಿ, ನ್ಯಾಯಕ್ಕೆ ಹೊಂದುವ ಮತವನ್ನೇ ಯಥಾರ್ಥವೆಂದು ನಿರ್ಣಯಿಸಬಹುದಲ್ಲವೆ?"—ಎಂದರೆ; ಇದು ಆಗುವಂತಿಲ್ಲ. ಏಕೆಂದರೆ, ಪ್ರತಿಯೊಂದು ಮತದವರೂ, ಇಂಥ ಉಪಕ್ರಮೋಪ

ಸಂಹಾರಾದಿನ್ಯಾಯಪೂರ್ವಕವಾಗಿಯೇ, ತಮ್ಮ ತಮ್ಮ ಅಭಿಮತಾರ್ಥವನ್ನೇ ವ್ಯಾಸತಾತ್ಪರ್ಯಾರ್ಥವೆಂದು ಪ್ರತಿಪಾದಿಸಿರುತ್ತಾರೆ.

"ಹಾಗಾದರೆ ನಾವೇ ಈ ಭಾಷ್ಯಗಳನ್ನು ವಿಮರ್ಶಿಸಿ, ಶ್ರುತಿ, ಯುಕ್ತಿಗಳ ಸ್ವಾರಸ್ಯಗಳ ಬಲಾಬಲಗಳಿಂದ ನಿರ್ಣಯಿಸೋಣ"—ಎಂದರೆ, ಇದೂ ಆಗದು. ಏಕೆಂದರೆ, ಇಲ್ಲಿ ಯುಕ್ತಿಮಾತ್ರದ ಬಲದಿಂದ ನಿರ್ಣಯಿಸುವುದೋ, ಶ್ರುತಿಮಾತ್ರಬಲದಿಂದಲೋ, ಅಥವಾ ಯುಕ್ತಿಸಹಿತವಾದ ಶ್ರುತಿಯ ಬಲದಿಂದಲೋ? "ನೈಷಾ ತರ್ಕೇಣ ಮತಿರಾಪನೇಯಾ—'ಇದು ತರ್ಕದಿಂದ ತಿಳಿದುಬರುವಂಥದ್ದಲ್ಲ'; 'ತರ್ಕಾಪ್ರತಿಷ್ಠಾನಾತ್'—'ತರ್ಕವು ನಿಲುಗಡೆಯಿಲ್ಲದ್ದು'; 'ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನುಮಾತೃಭಿಃ। ಅಭಿಯುಕ್ತತರೈರನ್ಯೈರನ್ಯಥೈವೋಪಪಾದ್ಯತೇ॥"—'ಅನುಮಾನದಲ್ಲಿ ನಿಪುಣರಾದವರೂ ವಿಚಾರಮಾಡಿ ಯುಕ್ತಿಯಿಂದ ಸ್ಥಾಪಿಸಿದ ಅರ್ಥವೂ, ಇನ್ನೂ ಹೆಚ್ಚು ಬುದ್ಧಿಶಾಲಿಗಳವರಿಂದ ತಪ್ಪಾಗಿ ಮಾಡಲ್ಪಡುತ್ತದೆ'—ಮುಂತಾದ ವಚನಗಳಿಂದ, ವೇದಾಂತಮಾತ್ರದಿಂದಲೇ ತಿಳಿದುಬರುವ ತತ್ತ್ವವನ್ನು ಕೇವಲಯುಕ್ತಿಯಿಂದ ನಿರ್ಣಯಿಸುವುದು ಆಗದ ಮಾತು.

ಇನ್ನು, ಶ್ರುತಿಮಾತ್ರದ ಬಲದಿಂದ ಎಂದರೆ, ಶ್ರುತಿಯಲ್ಲಿ 'ಅಹಂ ಬ್ರಹ್ಮ' ಎಂದು ಮುಂತಾದ ಅಭೇದಶ್ರುತಿಗಳೂ, 'ದ್ವಾ ಸುಪರ್ಣಾ'—ಮುಂತಾದ ಭೇದಶ್ರುತಿಗಳೂ ಇರುವುದರಿಂದ, ಇವುಗಳಲ್ಲಿ ಯಾವುದೊಂದೇ ಸರಿಯೆಂದು ನಿರ್ಣಯವು ಶಕ್ಯವಲ್ಲ.

ಮತ್ತೆ, ಯುಕ್ತಿಸಹಿತಶ್ರುತಿಯ ಬಲದಿಂದ ನಿರ್ಣಯವನ್ನು ಮಾಡೋಣವೆಂದರೆ, ಮೊದಲೇ ಹೇಳಿರುವಂತೆ, ಪ್ರತಿಯೊಬ್ಬ ಭಾಷ್ಯಕಾರರೂ, ಈ ರೀತಿಯಲ್ಲಿಯೇ ತಮ್ಮ ತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸಿರುವುದರಿಂದ, ಇದರಲ್ಲಿ ಮತ್ತೆ ಬಲಾಬಲಗಳನ್ನು ವಿಮರ್ಶಿಸುವುದು ಸಾಧ್ಯವಾಗದ ಮಾತು.

ಆದರೂ, ಹೀಗೆ ಮಾಡಬಹುದಲ್ಲವೆ?—ಹೇಗೆಂದರೆ—"ವ್ಯಾಸರ ತಾತ್ಪರ್ಯವನ್ನು ನಿರ್ಣಯಿಸಬೇಕೆಂದು ಅಭಿಪ್ರಾಯವನ್ನುಳ್ಳ ಒಬ್ಬ ರಾಜನ ಸಭೆಯಲ್ಲಿ, ಎಲ್ಲ ಮತದ ವಿದ್ವಾಂಸರುಗಳನ್ನು ಕರೆಯಿಸಿ, ವಾದವಿವಾದಗಳನ್ನು ನಡೆಯಿಸಿ, ಅಲ್ಲಿ ಮಧ್ಯಸ್ಥರು ನಿರ್ಣಯಿಸುವ ಮತವೇ ಯಥಾರ್ಥವಾದುದೆಂದು ತೀರ್ಮಾನಿಸಬಹುದಲ್ಲವೆ?"—ಎಂದರೆ;

ಇದು ಗೋಡೆಯೇ ಇಲ್ಲದೆ ಚಿತ್ರವನ್ನು ಬರೆಯುವುದೇ ಸರಿ. ಏಕೆಂದರೆ, ಮೊದಲಲ್ಲಿ, ಅಂಥ ರಾಜನೇ ಯಾರೂ ಇಲ್ಲ. ಇದಲ್ಲದೆ, ಅಂಥ ಮಧ್ಯಸ್ಥನು ವಂಧ್ಯಾಪುತ್ರನೇ ಸರಿ! ಇಲ್ಲಿ ಮಧ್ಯಸ್ಥನೆಂದರೆ, ವಾದಿಗಳ ಯಾವ ಪಕ್ಷಕ್ಕೂ ಸೇರದವನಾಗಿದ್ದು, ಆ ವಾದಿಗಳು ಮಾಡುವ ವಾದಗಳನ್ನೆಲ್ಲ ಸರಿಯಾಗಿ ತಿಳಿದುಕೊಂಡು. ಅವುಗಳ ಬಲಾಬಲಗಳನ್ನು ನಿಶ್ಚಯಿಸುವ ಸಾಮರ್ಥ್ಯಶಾಲಿ ಯಾದವನು. ಇಂಥ ಮಧ್ಯಸ್ಥನು ವೇದಬಾಹ್ಯವಾದ ನಾಸ್ತಿಕಮತದವನು ಆದಾನೋ; ಕಪಿಲಕಣಾದಾದಿಮತದವನೋ. ಅಥವಾ ವೇದಾಂತಮತದವ ರೆಂದು ಹೇಳಿಕೊಳ್ಳುವನರಲ್ಲಿ ಯಾವನಾದರೂ ಒಬ್ಬನೋ? ಬೌದ್ಧ, ಜೈನ ಮುಂತಾದ ನಾಸ್ತಿಕಮತದವರು ವೇದವನ್ನು ಪ್ರಮಾಣವೆಂದು ಒಪ್ಪುವುದಿಲ್ಲ ವಾದ್ದರಿಂದ, ವೇದಾಂತವಾಕ್ಯಗಳ ಅರ್ಥವನ್ನು ನಿರ್ಣಯಿಸುವ ಸಾಮರ್ಥ್ಯವು ಅವರಿಗೆ ಸಂಭವಿಸುವುದೇ ಇಲ್ಲ. ಇದಲ್ಲದೆ, ವೇದವಾಕ್ಯವನ್ನು ಕೇಳುವುದಕ್ಕೇ ಅಧಿಕಾರವಿಲ್ಲದ ಈ ನಾಸ್ತಿಕರ ಎದುರಿನಲ್ಲಿ ವೇದಾಂತವಾಕ್ಯಗಳನ್ನು ಉದಾಹರಿಸಿ ವಿಚಾರಮಾಡುವುದು ಪಾಪಕರವೇ ಆಗುವುದು.

ಕಪಿಲಕಣಾದಾದಿಮತದವರೆಂದು ಲೋಕದಲ್ಲಿ ಯಾರೂ ಇಲ್ಲವಾದ್ದ ರಿಂದ, ಇವರು ಮಧ್ಯಸ್ಥರಾಗುವುದು ಸಂಭಾವಿತವೇ ಆಗುವಂತಿಲ್ಲ.

ಇನ್ನು, ವೇದಾಂತಮತದವರಲ್ಲಿ ಯಾರಾದರೂ ಮಧ್ಯಸ್ಥರಾಗಬೇಕಾ ದೀತು! ಪ್ರಕೃತದಲ್ಲಿ ವೇದಾಂತಮತದವರೆಂದು ಹೇಳಿಕೊಳ್ಳುವವರಲ್ಲಿ ಭಗವತ್ಪಾದರ, ರಾಮಾನುಜರ, ಮಧ್ವರ ಮತ್ತು ಶ್ರೀಕಂಠಾಚಾರ್ಯರ— ಈ ನಾಲ್ಕು ಮತದವರೇ ಇರುತ್ತಾರೆ. ಇವರುಗಳಿಗೆ ಅಭಿಮತವಾಗಿರುವ ಅರ್ಥಗಳೂ ಪರಸ್ಪರವಿರುದ್ಧಗಳೇ ಆಗಿರುವುದರಿಂದ, ಪಕ್ಷಪಾತವಿಲ್ಲದಿರುವಂಥ ಮಧ್ಯಸ್ಥತ್ವವು ಇವರಿಗೂ ಸಂಭವಿಸುವುದಿಲ್ಲ. ಅವರವರ ಸಂಪ್ರದಾಯದಿಂದ ಬಂದಿರುವ ಅರ್ಥದಲ್ಲಿಯೇ ಅವರವರಿಗೆ ಅಭಿಮಾನವು ದೃಢವಾಗಿರುವುದು ಸಹಜವಾಗಿರುತ್ತದೆ—ಇದನ್ನು ಬಿಡಿಸುವುದು ಬ್ರಹ್ಮನಿಂದಲೂ ಸಾಧ್ಯವಾಗು ದಿಲ್ಲ. ಒಂದುವೇಳೆ ಒಬ್ಬ ಮತದವರನ್ನು ವಾದದಲ್ಲಿ ಉತ್ತರ ಹೇಳಲಾರದಂತೆ ಮಾಡಿ ಜಯಿಸುವುದಾದರೂ—ಆಗ ಅವರು—"ನನಗೆ ಉತ್ತರ ಹೇಳಲು ಸಾಮರ್ಥ್ಯವಿಲ್ಲವೆಂದು ಮಾತ್ರ ಆಯಿತೇ ಹೊರತು, ನನ್ನ ಮತವು ಸರಿಯಲ್ಲ ಎಂದಾಗುವುದಿಲ್ಲ"—ಎಂದೇ ಪಟ್ಟುಹಿಡಿಯುವರು; ಹೀಗಾಗಿ ತತ್ತ್ವ

ನಿರ್ಣಯವು ಗಗನಕುಸುಮಸಮವೇ ಆಗುವುದು. ಅವರವರ ಮತದಲ್ಲಿನ ದುರಾಗ್ರಹವನ್ನು ಪರಿಹರಿಸುವುದು ಅಶಕ್ಯವೇ ಸರಿ.

"ಹೀಗೆ ಯಾವ ರೀತಿಯಿಂದಲೂ ತತ್ತ್ವವನ್ನು ನಿಶ್ಚಯಿಸುವುದು ಸಾಧ್ಯವಲ್ಲವೆಂದಾದರೆ, ನೀವಾದರೂ ತತ್ತ್ವನಿರ್ಣಯಮಾಡುತ್ತೇವೆಂದು ಹೇಗೆ ಹೊರಟಿದ್ದೀರಿ?"—ಎಂದರೆ; ಕೇಳಿ, ಹೇಳುತ್ತೇವೆ—ನ್ಯಾಯಾಚಾರ್ಯರಾದ ಗೌತಮಮಹರ್ಷಿಗಳು—"ವಿಪ್ರತಿಪತ್ತೌ ಸಾಕ್ಷಿನಿಮಿತ್ತಾ ಸತ್ಯವ್ಯವಸ್ಥಾ ।"—"ಒಂದು ವಿಷಯದಲ್ಲಿ ವಿರುದ್ಧಗಳಾದ ಅಭಿಪ್ರಾಯಗಳು ಉಂಟಾದಾಗ, ಸಾಕ್ಷಿಗಳ ಮೂಲಕವಾಗಿ ಸತ್ಯವನ್ನು ವ್ಯವಸ್ಥೆ ಮಾಡತಕ್ಕದ್ದು" —ಎಂದು ಹೇಳಿರುತ್ತಾರೆ.

"ಇದು ಸರಿಯೇ; ಆದರೆ, ಅಂಥ ಸಾಕ್ಷಿಯಾದ ಮಧ್ಯಸ್ಥರೇ ಯಾರೂ ಸಂಭವಿಸುವುದಿಲ್ಲವೆಂದು ಇದುವರೆವಿಗೂ ವಿಮರ್ಶಿಸಿದ್ದಾಗಿದೆಯಲ್ಲವೆ?"—ಎಂದರೆ, ಹೌದು. ಆದಗೂ, ಈ ವಿಷಯದಲ್ಲಿ ಎಂದರೆ, ವೇದಾಂತಸಿದ್ಧಾಂತಾರ್ಥವು ಯಾವುದು?—ಎಂಬ ವಿಷಯದಲ್ಲಿ, ವೇದಾಂತಿಗಳಲ್ಲದ ಇತರ ಆಸ್ತಿಕ, ನಾಸ್ತಿಕ, ತಾಂತ್ರಿಕ—ಎಲ್ಲ ಮತದವರೂ ನಮಗೆ ಸಾಕ್ಷಿಗಳಾಗುತ್ತಾರೆ

"ಅದು ಹೇಗೆ?—ಇವರುಗಳು ಭೇದಾಭೇದಾದಿಪರಸ್ಪರವಿರುದ್ಧ ಸಿದ್ಧಾಂತಗಳನ್ನು ಅವಲಂಬಿಸಿರುವುದರಿಂದ, ಇವರು ಈ ವಿಷಯದಲ್ಲಿ ಮಧ್ಯಸ್ಥರಾಗಲಾರರು—ಎಂದು ನೀವೇ ಹೇಳಿದ್ದೀರಲ್ಲವೆ?"—ಎಂದರೆ; ಭೇದಾಭೇದ ಪ್ರತಿಪಾದಕಳಾಗಿರುವ ಶ್ರುತಿಗೆ ಎಲ್ಲಿ ತಾತ್ಪರ್ಯವಿರುತ್ತದೆ?—ಎಂಬುದನ್ನು ವಿಮರ್ಶಿಸುವುದರಲ್ಲಿ ಇವರುಗಳು ಮಧ್ಯಸ್ಥರಾಗುವುದಿಲ್ಲವೆಂಬುದು ಸರಿಯೇ. ಆದರೂ—'ಯಾವತ್ಪರಮತಂ ನ ನಿರಾಕ್ರಿಯತೇ ತಾವತ್ಸ್ವಮತಮ-ಪ್ರತಿಷ್ಠಿತಂ ಭವತಿ।'—'ಇತರ ಮತಗಳನ್ನೆಲ್ಲ ಸಮಂಜಸಗಳಲ್ಲವೆಂದು ನಿರಾಕರಿಸದಿದ್ದರೆ, ತಮ್ಮ ಮತವು ಸ್ಥಿರಪಡುವುದಿಲ್ಲ'—ಎಂಬುದು ಸಿದ್ಧಾಂತಕಾರರಿಗೆಲ್ಲ ಸಮ್ಮತವಾಗಿರುವ ಸ್ಥಿತಿಯು. ಇದನ್ನು ಅನುಸರಿಸಿ, ಈ ಮತದವರು ಪ್ರತಿಯೊಬ್ಬರೂ, ತಮ್ಮ ತಮ್ಮ ಸಿದ್ಧಾಂತವನ್ನೇ ಸರಿಯೆಂದು ಸ್ಥಾಪಿಸುವುದಕ್ಕಾಗಿ, ಇತರ ಮತಗಳ ಸಿದ್ಧಾಂತಾರ್ಥಗಳನ್ನು ಎತ್ತಿ ತೋರಿಸಿ, ಅವುಗಳನ್ನು ಅಸಂಗತಗಳೆಂದು ನಿರಾಕರಿಸಬೇಕಾಗಿದೆ—ಹಾಗೆಯೇ ಎಲ್ಲರೂ ಮಾಡಿರುತ್ತಾರೆ. ಹೀಗೆ ಮಾಡುವಲ್ಲಿ, ಇವರೆಲ್ಲರೂ, ಇತರ ಎಲ್ಲ ಮತಗಳ ಸಿದ್ಧಾಂತಾರ್ಥ

ಗಳನ್ನೂ ತಿಳಿದೇ ಇರಬೇಕು—ಸರಿಯಾಗಿ ತಿಳಿಯದೆ ನಿರಾಕರಿಸುವುದು ಅಯುಕ್ತವಾಗುವುದು; ತನ್ನ ಮತವೂ ಸ್ಥಿರವಾಗದೆ ಹೋಗುವುದು. ತನ್ನ ಸಿದ್ಧಾಂತದ ಸ್ಥಾಪನೆಗಾಗಿ ಇತರ ಮತಗಳ ಸಿದ್ಧಾಂತಗಳನ್ನು ಹೀಗೆ ಅನುವಾದಮಾಡುವಲ್ಲಿ, ಇವರುಗಳಿಗೇನೂ ಅವುಗಳಲ್ಲಿ ಅಭಿಮಾನಲೇಶವೂ ಇರುವಂತಿಲ್ಲ. ಈ ಪ್ರಕಾರವಾಗಿ ಆಸ್ತಿಕನಾಸ್ತಿಕತಾಂತ್ರಿಕಮತಪ್ರವರ್ತಕರು ಗಳು, ತಮ್ಮ ತಮ್ಮ ಮತಗಳನ್ನು ಪ್ರತಿಪಾದಿಸುವ ಭರದಲ್ಲಿ, ಇತರ ಮತ ಗಳನ್ನು ನಿರಾಕರಿಸುವಂತೆ, ವೇದಾಂತಸಿದ್ಧಾಂತವನ್ನೂ ಅನುವಾದಮಾಡಿ ಅದನ್ನು ನಿರಾಕರಿಸುತ್ತಾರೆ. ಇದರಲ್ಲಿ ಅವರಿಗೆ ಪಕ್ಷಪಾತವಿರುವ ಕಾರಣವಿಲ್ಲದ್ದ ರಿಂದ—'ವೇದಾಂತಸಿದ್ಧಾಂತವು ಯಾವುದು?' —ಎಂಬ ವಿಷಯದಲ್ಲಿ ಅವರು ಗಳ ಈ ಅನುವಾದವು ನಮಗೆ ಸರಿಯಾದ ಸಾಕ್ಷಿಯಾಗುವುದು!

ಭಗವದ್ಬಾದರಾಯಣವ್ಯಾಸರು 'ರಚನಾನುಪಪತ್ತೇಶ್ಚ ನಾನುಮಾನಂ।' —ಎಂದು ಮುಂತಾದ ಅಧಿಕರಣಗಳಲ್ಲಿ ಸಾಂಖ್ಯಮತವನ್ನು ನಿರಾಕರಿಸಿರು ತ್ತಾರೆ. ಇದರಂತೆಯೇ ಸಾಂಖ್ಯಮತಪ್ರವರ್ತಕರಾದ ಕಪಿಲಮಹರ್ಷಿಗಳು ತಮ್ಮ ಸಾಂಖ್ಯಸೂತ್ರಗಳಲ್ಲಿ, ವೇದಾಂತಮತವನ್ನು ನಿರಾಕರಿಸುವ ಪ್ರಸಂಗದಲ್ಲಿ, ಕೇವಲಾದ್ವೈತ, ಭೇದೌಪಾಧಿಕತ್ವ, ಪ್ರಪಂಚದ ಅನಿರ್ವಚನೀಯತ್ವ— ಇವೇ ಮೊದಲಾದ ವಿಷಯಗಳನ್ನು ಅನುವಾದಮಾಡಿ ನಿರಾಕರಿಸುವುದು ಸ್ಪಷ್ಟವಾಗಿದೆ. ಹೇಗೆಂದರೆ—

ಸಾಂಖ್ಯಶಾಸ್ತ್ರದ ಮೊದಲನೆಯ ಅಧ್ಯಾಯದಲ್ಲಿ—'ನಾವಿದ್ಯಾತೋಽ ಪ್ಯವಸ್ತುನಾ ಬಂಧಾಯೋಗಾತ್।'—"ಅವಿದ್ಯೆಯಿಂದ ಸಂಸಾರಬಂಧವಾಗಿದೆ ಯೆಂದು ಹೇಳುವುದು ಸರಿಯಲ್ಲ; ಅವಿದ್ಯೆಯನ್ನು ಅವಸ್ತುವೆಂದು ಹೇಳುವುದ ರಿಂದ ಅವಸ್ತುವಿನಿಂದ ಬಂಧವು ಉಂಟಾಗಲಾರದು"; "ವಸ್ತುತ್ವೇ ಸಿದ್ಧಾಂತ ಹಾನಿಃ।" "ಅವಿದ್ಯೆಯು ವಸ್ತುವಲ್ಲ, ವಸ್ತುವೇ—ಎಂದು ಹೇಳಿದರೆ, ಬ್ರಹ್ಮ ವೊಂದು ವಸ್ತು, ಅವಿದ್ಯೆಯು ಮತ್ತೊಂದು ವಸ್ತು ಎಂದು ಎರಡು ವಸ್ತು ಗಳು ಸಂಭವಿಸುತ್ತ, ಬ್ರಹ್ಮವೊಂದೇ ವಸ್ತುವೆಂಬ ಸಿದ್ಧಾಂತಕ್ಕೆ ಹಾನಿಯಾಗು ವುದು."; 'ವಿಜಾತೀಯದ್ವೈತಾಪತ್ತಿಶ್ಚ।'—"ಒಂದು ವೇಳೆ ಅವಿದ್ಯೆಯನ್ನು ಅನಿರ್ವಚನೀಯವಾದುದೆಂದು ಹೇಳುವುದರಿಂದ, ಅದು ವಸ್ತುವಲ್ಲನಾಗಿ, ಬ್ರಹ್ಮವು ಅದ್ವಿತೀಯವೆಂಬುದಕ್ಕೆ ವಿರೋಧವಾಗುವುದಿಲ್ಲವೆಂದು ಹೇಳಿದರೂ

ಅವಿದ್ಯೆಯು ಅವಸ್ತುವಾದ್ದರಿಂದ, ಬ್ರಹ್ಮದೊಡನೆ ವಿಜಾತೀಯವಾದ ಅನಿರ್ವಚನೀಯದ್ವೈತವು ಸಂಭವಿಸುವುದು." "ವಿರುದ್ಧೋಭಯರೂಪಾ ಚೇನ್ನ ತಾದೃಕ್ಪದಾರ್ಥಾಪ್ರತೀತೇಃ।"—"ಅವಿದ್ಯೆಯು ಸದ್ರೂಪವೂ ಅಸದ್ರೂಪವೂ ಆಗಿ ವಿರುದ್ಧವಾದ ಎರಡುರೂಪವಾಗಿದೆಯೆಂದೂ, ಆದ್ದರಿಂದಲೇ ಅನಿರ್ವಚನೀಯವೆಂದೂ ಹೇಳಿದರೆ, ಇಂಥ ವಸ್ತುವು ಯಾವುದೂ ಲೋಕದಲ್ಲಿ ಪ್ರಸಿದ್ಧವಾಗಿಲ್ಲವಾಗಿ, ಹಾಗೆ ಒಪ್ಪಲಾಗುವುದಿಲ್ಲ"

ಹಾಗೆ ಅಲ್ಲಿಯೇ—

"ಉಪಾಧಿಭೇದೋಽಪ್ಯೇಕಸ್ಯ ನಾನಾಯೋಗ ಆಕಾಶಸ್ಯೇವ ಘಟಾದಿಭಿಃ। ಉಪಾಧಿರ್ಭಿದ್ಯತೇ ನ ತು ತದ್ವಾನ್। ಏವಮೇಕತ್ವೇನ ಪರಿವರ್ತಮಾನಸ್ಯ ನ ವಿರುದ್ಧಧರ್ಮಾಧ್ಯಾಸಃ। ನಾದ್ವೈತಶ್ರುತಿವಿರೋಧೋ ಜಾತಿಪರತ್ವಾತ್। ವಾಮದೇವಾದಿಮುಕ್ತೋ ನಾದ್ವೈತಂ।"

"ಆಕಾಶವು ಒಂದೇ ವಸ್ತುವಾದರೂ ಘಟ—ಮೊದಲಾದ ಉಪಾಧಿಗಳಿಂದ ಭೇದವು ಕಂಡುಬರುವಂತೆ, ಅದ್ವಿತೀಯನಾದ ಆತ್ಮನಲ್ಲಿ ದೇಹೋಪಾಧಿಗಳಿಂದ ಭೇದವು; ಉಪಾಧಿಗಳು ಬೇರೆಯಾಗಿವೆಯೇ ಹೊರತು, ಅದನ್ನುಳ್ಳ ಆತ್ಮನಲ್ಲಿ ಭೇದವಿಲ್ಲ—ಎಂದು ಹೇಳುವುದು ಸರಿಯಲ್ಲ. ಒಬ್ಬನೇ ಆಗಿರುವ ಆತ್ಮನಲ್ಲಿ ವಿರುದ್ಧಧರ್ಮಗಳ ಅಧ್ಯಾಸವು ಸಂಭವಿಸಲಾರದು. ಆತ್ಮನನ್ನು ಅದ್ವಿತೀಯನೆಂದು ಹೇಳುವ ಶ್ರುತಿಯ ವಿರೋಧವೇನೂ ಇಲ್ಲ; ಅದು—ಆತ್ಮನ ಜಾತಿಯು ಒಂದು—ಎಂಬ ಅರ್ಥದ್ದು—ಗೋತ್ವಜಾತಿಯು ಒಂದೆಂದಾದರೆ, ಗೋವುಗಳೆಲ್ಲ ಒಂದೆ? ವಾಮದೇವರು ಮುಕ್ತರಾದರೆಂದು ಶ್ರುತಿಯು ಹೇಳುವುದು ಸರಿಯೇ; ಅದರಿಂದ ಅವರು ಅದ್ವಿತೀಯರೆಂದು ಹೇಗೆ ಸಿದ್ಧಿಸುತ್ತದೆ?"

ಐದನೆಯ ಅಧ್ಯಾಯದಲ್ಲಿ—

'ನಾವಿದ್ಯಾಶಕ್ತಿಯೋಗೋ ನಿಃಸಂಗಸ್ಯ। ತದ್ಯೋಗೇ ತತ್ಸಿದ್ಧಾವನ್ಯೋನ್ಯಾಶ್ರಯತ್ವಂ।'

"ಅವಿದ್ಯಾಶಕ್ತಿಯ ಸಂಬಂಧದಿಂದ ಬ್ರಹ್ಮವು ಜಗತ್ಕಾರಣವೆಂದು ಹೇಳುವುದು ಸರಿಯಲ್ಲ; ಅಸಂಗಸ್ವರೂಪದ ಬ್ರಹ್ಮಕ್ಕೆ ಅವಿದ್ಯಾಶಕ್ತಿಯ ಸಂಬಂಧವು ಆಗುವುದಿಲ್ಲ; ಅವಿದ್ಯಾಶಕ್ತಿಯ ಸಂಬಂಧವು ಬ್ರಹ್ಮಕ್ಕೆ ವಾಸ್ತವವಾದುದಲ್ಲ, ಅವಿದ್ಯೆಯಿಂದಲೇ ಆಗುತ್ತದೆ ಎಂದು ಹೇಳಿದರೆ, ಅವಿದ್ಯೆಯಿಂದ

ಅವಿದ್ಯಾಸಂಬಂಧ— ಎಂದು ಅನ್ಯೋನ್ಯಾಶ್ರಯದೋಷವು ಸಂಭವಿಸುವುದು.

“ನಾದ್ವೈತಮಾತ್ಮನೋ ಲಿಂಗಾತ್ತದ್ಭೇದಪ್ರತೀತೇಃ |”

“ಆತ್ಮನು ಅದ್ವಿತೀಯನು–ಒಬ್ಬನೇ–ಎಂಬುದು ಸರಿಯಲ್ಲ; “ಒಬ್ಬನು ಸುಖೀ, ಒಬ್ಬನು ದುಃಖೀ; ಒಬ್ಬನು ಹುಟ್ಟುವವನು, ಒಬ್ಬನು ಮೃತನಾಗುವನು— ಎಂದು ಮುಂತಾಗಿ ಆತ್ಮಭೇದವು ಸ್ಪಷ್ಟವಿದೆ.”

“ನಾತ್ಮಾವಿದ್ಯಾ ನೋಭಯಂ ಜಗದುಪಾದಾನಕಾರಣಂ ನಿಃಸಂಗತ್ವಾತ್ |”

“ಆತ್ಮನು ನಿರ್ವಿಕಾರನಾದ್ದರಿಂದಲೂ, ಅವಿದ್ಯೆಯು ಜಡವಾದ್ದರಿಂದಲೂ, ಜಗತ್ತಿಗೆ ಉಪಾದಾನಕಾರಣವಾಗುವುದಿಲ್ಲ; ಆತ್ಮನು ಅಸಂಗಸ್ವರೂಪನಾದ್ದರಿಂದ, ಆತ್ಮನೂ ಅವಿದ್ಯೆಯೂ ಇವೆರಡೂ ಸೇರಿ ಜಗದುಪಾದಾನವೆಂಬುದೂ ಸಂಗತವಲ್ಲ.”

“ನೈಕಸ್ಯಾನಂದಚಿದ್ರೂಪತ್ವೇ ದ್ವಯೋರ್ಭೇದಾತ್ | ನಾನಂದಾಭಿವ್ಯಕ್ತಿರ್ಮುಕ್ತಿರ್ನಿರ್ಧರ್ಮಕತ್ವಾತ್ |”

“ಒಬ್ಬ ಆತ್ಮನು ಆನಂದರೂಪನೂ ಚಿದ್ರೂಪನೂ ಆಗಿರುವನೆಂಬುದು ಯುಕ್ತವಾಗುವುದಿಲ್ಲ, ಆನಂದವೂ ಚಿತ್ತ್ವವೂ ಬೇರೆ ಬೇರೆ ಧರ್ಮಗಳಾಗಿವೆ. ಆತ್ಮನನ್ನು ನಿರ್ಧರ್ಮಕನೆಂದು ಒಪ್ಪುವ ಮತದಲ್ಲಿ, ಆನಂದದ ಅಭಿವ್ಯಕ್ತಿಯು ಮುಕ್ತಿಯೆಂಬುದು ಕೂಡುವುದಿಲ್ಲ.”

“ಉಪಾಧಿಶ್ಚೇತ್ತತ್ಸಿದ್ಧೌ ಪುನರ್ದ್ವೈತಂ | ಜಗತ್ಸತ್ಯತ್ವಮದುಷ್ಟಕಾರಣಜನ್ಯತ್ವಾದ್ಬಾಧಕಾಭಾವಾತ್ ||”

“ಆತ್ಮನಿಗೆ ಉಪಾಧಿಯಿಂದ ಭೇದವೇ ಹೊರತು, ಅದು ವಾಸ್ತವವಲ್ಲವೆಂದು ಹೇಳಿದರೆ; ಆತ್ಮನಿಗೆ ಉಪಾಧಿಯು ಇರುವುದೆಂದು ಒಪ್ಪಿದರೆ ಮತ್ತೆ ದ್ವೈತವೇ ಸಂಭವಿಸುತ್ತದೆ. ಬ್ರಹ್ಮವನ್ನು ಸರ್ವದೋಷರಹಿತವಾದುದೆಂದೂ, ಅದೇ ಜಗತ್ತಿಗೆಲ್ಲ ಕಾರಣವೆಂದೂ ಹೇಳಿದರೆ, ನಿರ್ದುಷ್ಟವಾದ ಬ್ರಹ್ಮದಿಂದ ಹುಟ್ಟಿರುವ ಜಗತ್ತು ಸತ್ಯವೆಂದೇ ಸಿದ್ಧಿಸುವುದು; ಜಗತ್ತನ್ನು ಸತ್ಯವೆಂದು ಒಪ್ಪುವಲ್ಲಿ ಬಾಧಕವೂ ಏನೂ ಇರುವುದಿಲ್ಲ.”

ಮೇಲೆ ಉದಾಹರಿಸಿರುವ ಈ ಕೆಲವು ಕಪಿಲಸೂತ್ರಗಳಲ್ಲಿ ಅದ್ವೈತಮತಕ್ಕೆ ಸಮ್ಮತಗಳಾದ ಅವಿದ್ಯೆ, ಆತ್ಮೈಕತ್ವ—ಮುಂತಾದ ಅಂಶಗಳನ್ನು

ಉದಾಹರಿಸಿ ನಿರಾಕರಿಸಿರುವುದು ಸ್ಪಷ್ಟವೇ ಇದೆ. "ವಸ್ತುತ್ವೇ ಸಿದ್ಧಾಂತ ಹಾನಿಃ" ಎಂಬ ಸೂತ್ರಗಳಿಂದ, ಈ ಅಭಿಪ್ರಾಯಗಳು ಯಾವುದೋ ಸಿದ್ಧಾಂತ ದವುಗಳೆಂದು ನಿಶ್ಚಿತವಾಗುವುದು. "ಈ ಅದ್ವೈತಸಿದ್ಧಾಂತವಾದಿಯು ಯಾರು?"—ಎಂಬುದು ವಿಮರ್ಶನೀಯವಾಗಿದೆ. ಪತಂಜಲಿ, ಜೈಮಿನಿ, ಗೌತಮ, ಕಣಾದ—ಮುಂತಾದವರಾಗಲಿ, ಪಾಶುಪತಪಾಂಚರಾತ್ರಾದಿತಾಂತ್ರಿಕದವ ರಾಗಲಿ; ಚಾರ್ವಾಕಬೌದ್ಧಜೈನಾದಿಗಳಾಗಲಿ; ಇವರು ಯಾರೂ ಅದ್ವೈತ ವಾದಿಗಳಲ್ಲವೆಂದು ಸ್ಪಷ್ಟವೆ ಇದೆ. ಬಾದರಾಯಣವ್ಯಾಸರು ವೇದಾಂತಸಿದ್ಧಾಂತ ಪ್ರಚಾರಕರೆಂದೂ ಪ್ರಸಿದ್ಧವೇ ಇದೆ. ಆದಕಾರಣ, ಕಪಿಲರ ಸಾಂಖ್ಯಸೂತ್ರ ಗಳಲ್ಲಿ ಹೇಳಿ ನಿರಾಕರಿಸಿರುವ ಅದ್ವೈತಸಿದ್ಧಾಂತವು, ವ್ಯಾಸರಿಂದ ಪ್ರತಿಪಾದಿತ ವಾಗಿರುವ ವೇದಾಂತಸಿದ್ಧಾಂತವೇ ಎಂದು ಗತ್ಯಂತರವಿಲ್ಲದೆ ಸಿದ್ಧಿಸುವುದು.

ಈ ಪ್ರಕಾರವಾಗಿ ಅದ್ವೈತಸಿದ್ಧಾಂತವೇ ವ್ಯಾಸರಿಗೆ ಅಭಿಮತವಾಗಿರುವ ವೇದಾಂತಸಿದ್ಧಾಂತವೆಂದು ಸಾಂಖ್ಯಮತದ ಅನುವಾದದ ಬಲದಿಂದ ಅಬಾಧಿತ ವಾಗಿ ಸಿದ್ಧವಾಗಿದೆ. ಆದರೂ, ವೇದಾಂತಿಗಳೆಂದು ಹೇಳಿಕೊಳ್ಳುವ ಭೇದವಾದಿ ಗಳು, ತಮ್ಮತಮ್ಮ ಮತಗಳ ಮೇಲಿನ ದುರಭಿಮಾನವನ್ನು ಬಿಡಲು ಸಮರ್ಥ ರಾಗದೆ, ಸಾಂಖ್ಯರು ಮಾಡಿರುವ ಅದ್ವೈತಸಿದ್ಧಾಂತದ ಅನುವಾದವೆಂಬ ಈ ಬ್ರಹ್ಮಾಸ್ತ್ರದ ಮೇಲೆ, ತಮ್ಮ ಯುಕ್ತ್ಯಾಭಾಸಗಳೆಂಬ ಹುಲ್ಲುಕಡ್ಡಿಗಳಿಂದ ಪ್ರತೀಕಾರಮಾಡಲು ಸಾಹಸಪಡುತ್ತಾರೆ.

ಅವರು ಹೀಗೆ ಹೇಳುತ್ತಾರೆ—

೧. "ಸಾಂಖ್ಯಸೂತ್ರಗಳಲ್ಲಿ ಅದ್ವೈತಮತದ ಅನುವಾದವಿದೆ"—ಎಂಬ ಯುಕ್ತಿಯನ್ನು ಅದ್ವೈತಮತದ ಆಚಾರ್ಯರು ಯಾರೂ ಹೇಳಿರುವುದಿಲ್ಲ ವಾಗಿ, ಇದು ಅದ್ವೈತಮತವೇ ವ್ಯಾಸರ ಮತವೆಂಬಲ್ಲಿ ಸಾಧಕವಾಗುವುದಿಲ್ಲ;

೨. ಹಿಂದಿನ ಕಾಲದ ಕಪಿಲರು ದ್ವಾಪರಯುಗದವರಾದ ವ್ಯಾಸರ ಸಿದ್ಧಾಂತವನ್ನು ಅನುವಾದಮಾಡಿರುವರೆಂದು ಹೇಳುವುದು ಸಂಗತವಲ್ಲ;

೩. ಮೇಲೆ ಉದಾಹರಿಸಿರುವ ಕಪಿಲಸಾಂಖ್ಯಸೂತ್ರಗಳಲ್ಲಿ ಎಲ್ಲಿಯೂ ವ್ಯಾಸರ ಹೆಸರೇ ಇಲ್ಲವಾದ್ದರಿಂದ ಇದು ವ್ಯಾಸರ ಮತದ ಅನುವಾದವೆಂಬಲ್ಲಿ ಪ್ರಮಾಣವಾಗುವುದಿಲ್ಲ;

೪. ಕಪಿಲಸೂತ್ರಗಳಲ್ಲಿ ಹೇಳಿರುವ ಅಭಿಪ್ರಾಯಗಳು ವ್ಯಾಸರ ಬ್ರಹ್ಮ ಸೂತ್ರಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲವಾಗಿ, ಇವು ವ್ಯಾಸರ ಮತವೆಂದು ಹೇಳಲಾಗುವುದಿಲ್ಲ;

೫. ಕಪಿಲರಿಗೆ ವ್ಯಾಸರ ಮತವನ್ನು ನಿರಾಕರಿಸಬೇಕೆಂದು ತಾತ್ಪರ್ಯ ವಿರುವುದಾದರೆ 'ಈಶ್ವರಾಸಿದ್ಧೇಃ|'—ಎಂದು ಮುಂತಾಗಿ, ವ್ಯಾಸರು ಒಪ್ಪಿರುವ ಈಶ್ವರನನ್ನು ನಿರಾಕರಿಸಿರುವುದರಿಂದಲೇ ಇದು ಸಿದ್ಧವಾಗಿರುತ್ತದೆ; ಆದಕಾರಣ ಅದ್ವೈತಾದಿವಿಷಯಗಳನ್ನು ನಿರಾಕರಿಸಿರುವುದು ವ್ಯಾಸರ ಮತದ ನಿರಾಕರಣೆ ಯೆಂದು ಕಲ್ಪಿಸುವ ಅವಶ್ಯವಿಲ್ಲ.

೬. ಒಂದು ವೇಳೆ ಅದ್ವೈತವಾದಿಯು ಯಾರೂ ವಸ್ತುತಃ ಇಲ್ಲದೇ ಇದ್ದರೂ, ಕಪಿಲರು ತಮ್ಮ ಮತದ ಸ್ಥಾಪನೆಗಾಗಿ ಇಂಥದ್ದೊಂದು ಮತವನ್ನು ಊಹಿಸಿ ನಿರಾಕರಿಸಿರುವರೆಂದೂ ಹೇಳಬಹುದಾಗಿದೆ.

೭. ಅಥವಾ, ಕಪಿಲರ ಕಾಲದಲ್ಲಿದ್ದ ಯಾವನೋ ಒಬ್ಬನ ಅದ್ವೈತ ಮತವನ್ನು ನಿರಾಕರಿಸಿರುವರೆಂದೂ ಹೇಳಬಹುದು;

೮. ಸೂತಸಂಹಿತೆ, ವಿಷ್ಣುಪುರಾಣ ಮುಂತಾದವುಗಳಲ್ಲಿ ಅದ್ವೈತವನ್ನು ಹೇಳಿರುವ ಸೂತರು, ಜಡಭರತ—ಇವರೇ ಮೊದಲಾದವರ ಮತದ ನಿರಾಕರಣೆ ಯಾಗಿರಬಹುದು;

೯. ವ್ಯಾಸರ ಬ್ರಹ್ಮಸೂತ್ರಗಳಲ್ಲಿ ಆರಂಭಣಾಧಿಕರಣಗಳನ್ನು ಕಂಡು, ಕೇವಲಾದ್ವೈತವೇ ವ್ಯಾಸರಿಗೆ ಸಮ್ಮತವೆಂದು ಭ್ರಾಂತಿಪಟ್ಟು, ಕಪಿಲರು ಅದನ್ನು ನಿರಾಕರಿಸಿರಬಹುದು;

೧೦. ಸರ್ವಜ್ಞರಾದ ಕಪಿಲಮಹರ್ಷಿಗಳು, ಮುಂದೆ ಕಲಿಯುಗದಲ್ಲಿ ಬಂದು ಅದ್ವೈತಮತವನ್ನು ಪ್ರತಿಪಾದಿಸುವ ಶಂಕರಭಗವತ್ಪಾದರ ಮತವನ್ನು ನಿರಾಕರಿಸಿರುವರೆಂದೂ ಹೇಳಲಾದೀತು;

೧೦. ವ್ಯಾಸರ ವೇದಾಂತಸೂತ್ರಗಳಲ್ಲಿ ಉದಾಹರಿಸಿರುವ, ವೇದಾಂತಿಗಳಲ್ಲಿ ಏಕದೇಶಿಗಳಾಗಿರುವ, ಆಶ್ಮರಥ್ಯ, ಔಡುಲೋಮಿ, ಕಾಶಕೃತ್ಸ್ನ, ಬಾದರಿ—ಇವರುಗಳ ಮತದ ನಿರಾಕರಣೆಯೂ ಆಗಿರಬಹುದು—ಎಂದು.

ಈ ಮೇಲಿನ ದ್ವೈತಿಗಳ ಆಕ್ಷೇಪಗಳು ಕೇವಲ ದುರಾಗ್ರಹದವುಗಳೇ ಸರಿ. ಅನಿರುದ್ಧವೃತ್ತಿಸಹಿತವಾಗಿ ಕಪಿಲಸೂತ್ರಗಳು ಪ್ರಸಿದ್ಧವಾಗಿದ್ದು, ಇವು

ಗಳಲ್ಲಿ ಮೇಲೆ ಉದಾಹರಿಸಿರುವ ಅದ್ವೈತಾನುವಾದ ಸೂತ್ರಗಳು ಇರುವುದ ರಿಂದ, ಇವುಗಳು ಕಪಿಲಸೂತ್ರಗಳಲ್ಲವೆಂದಾಗಲಿ, ಇವುಗಳಲ್ಲಿ ಅದ್ವೈತಾನು ವಾದವಿಲ್ಲವೆಂದಾಗಲಿ ಹೇಳುವಂತಿಲ್ಲ.

೧. 'ಕಪಿಲಸೂತ್ರಗಳಲ್ಲಿ ಅದ್ವೈತಮತದ ಅನುವಾದವಿದೆ'—ಎಂಬ ಯುಕ್ತಿಯನ್ನು ಅದ್ವೈತಮತದ ಆಚಾರ್ಯರುಗಳು ಯಾರೂ ಹೇಳಿಲ್ಲ—ಎಂಬ ಆಕ್ಷೇಪವು, ಅರ್ಥವಿಲ್ಲದ್ದೇ ಸರಿ. ಯಾರೂ ಹೇಳಿಲ್ಲವಾದರೂ, ಇದು ಪ್ರಕೃತದಲ್ಲಿ ಯುಕ್ತಿಯಾಗುವಲ್ಲಿ ಬಾಧಕವೇನೂ ಇಲ್ಲ; ಇದನ್ನು ಸರಿಯಲ್ಲ ವೆಂದು ತೋರಿಸಲೂ ಸಾಧ್ಯವಿಲ್ಲ.

೨. ವ್ಯಾಸರು ಕಪಿಲರು—ಮುಂತಾದ ಮಹರ್ಷಿಗಳು ಲೋಕಾನುಗ್ರಹ ಕ್ಕಾಗಿ ಆಗಾಗ ಅವತರಿಸಿಬರುತ್ತ ಶಾಸ್ತ್ರಗಳನ್ನು ಪ್ರಚಾರ ಮಾಡುತ್ತಿರುವರು. "ದ್ವಾಪರೇ ದ್ವಾಪರೇ ವಿಷ್ಣುರ್ವ್ಯಾಸರೂಪೀ ಮಹಾಮುನೇ | ವೇದ ಮೇಕಂ ಹಿ ಬಹುಧಾ ಕುರುತೇ ಜಗತೋ ಹಿತಂ ||"—"ಶ್ರೀವಿಷ್ಣುವೆ ಪ್ರತಿದ್ವಾಪರಯುಗದಲ್ಲಿ ವ್ಯಾಸರೂಪದಿಂದ ಅವತರಿಸಿಬಂದು, ಜಗತ್ತಿನ ಹಿತಕ್ಕಾಗಿ ವೇದವನ್ನು ಅನೇಕಭೇದವಾಗಿ ವಿಭಾಗಮಾಡಿ ಪ್ರಚಾರಮಾಡು ವನು"—ಎಂದು ಮುಂತಾದ ಪ್ರಮಾಣವಚನಗಳು ಈ ವಿಷಯವನ್ನು ತಿಳಿಸುತ್ತವೆ. ಹೀಗಿರುವಲ್ಲಿ ಇವರಲ್ಲಿ ಹಿಂದಿನವರು, ಮುಂದಿನವರು—ಎಂದು ಹೇಳುವುದೇ ಅಸಂಗತವು.

೩. ಮೇಲೆ ಉದಾಹರಿಸಿರುವ ಕಪಿಲಸೂತ್ರಗಳಲ್ಲಿ ವ್ಯಾಸರ ಹೆಸರು ಇಲ್ಲ ವೆಂಬ ಆಕ್ಷೇಪವೂ ಅನುಪಯುಕ್ತವೇ ಸರಿ. ಕಪಿಲಸೂತ್ರಗಳಲ್ಲಿ ತೋರಿಬರುವ ಅದ್ವೈತನಿರಾಕರಣೆಗಳಿಗೆ, ಬೇರೆ ವಾದಿಯು ಯಾರೂ ಸಂಭವಿಸುವುದಿಲ್ಲವಾದ್ದ ರಿಂದಲೇ ವ್ಯಾಸರೇ ವಾದಿಗಳೆಂದು ನಿಶ್ಚಿತವಾಗುತ್ತಿರುವಲ್ಲಿ, ಇಲ್ಲಿ ವ್ಯಾಸರ ಹೆಸರೂ ಇರಬೇಕೆಂದು ಹೇಳುವ ಕಾರಣವೇನು? ಹಾಗಿಲ್ಲವಾದರೆ, ವ್ಯಾಸರ ಸೂತ್ರಗಳಲ್ಲಿಯೂ ಸಾಂಖ್ಯಮತನಿರಾಕರಣೆಯ ಸೂತ್ರಗಳಲ್ಲಿ ಕಪಿಲರ ಹೆಸರೂ ಇರಬೇಕೆಂದು ಹೇಳಬೇಕಾದೀತು.

೪. ಕಪಿಲಸೂತ್ರಗಳಲ್ಲಿ ಅನುವಾದಮಾಡಿರುವ ಅದ್ವೈತಮತದ ಅಂಶ ಗಳು ವ್ಯಾಸಸೂತ್ರಗಳಲ್ಲಿ ಕಾಣಬರುವುದಿಲ್ಲವೆಂಬ ಆಕ್ಷೇಪವೂ ಅಯುಕ್ತವೇ ಸರಿ. 'ಅತ ಏವ ಚೋಪಮಾ ಸೂರ್ಯಕಾದಿವತ್'; ಆಭಾಸ ಏವ ಚ'—

ಮುಂತಾದ ಸೂತ್ರಗಳಲ್ಲಿ ಭೇದವು ಔಪಾಧಿಕವೆಂಬುದು ತಿಳಿದುಬರುತ್ತದೆ; "ಜನ್ಮಾದ್ಯಸ್ಯ ಯತಃ; ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ |" ಎಂಬಲ್ಲಿ ಬ್ರಹ್ಮವು ಅವಿದ್ಯಾಶಕ್ತಿಸಹಿತವಾಗಿ ಜಗತ್ತಿಗೆಲ್ಲ ಉಪಾದಾನಕಾರಣವೆಂಬುದು ತಿಳಿದುಬರುತ್ತದೆ.

"ಪ್ರಕೃತಿಸಹಿತವಾದ ಬ್ರಹ್ಮವು ಜಗತ್ತಿನ ಉಪಾದಾನಕಾರಣವೆಂಬ ಅಭಿಪ್ರಾಯವು ಶ್ರೀಕಂಠರಾಮಾನುಜಾದಿಮತಗಳಿಗೂ ಸಮಾನವಾಗಿದೆ; ಹೀಗಿರುವಲ್ಲಿ ಇದು ಅದ್ವೈತಮತದ ನಿರಾಕರಣೆಯೆಂದೇ ಹೇಳುವುದು ಹೇಗೆ?" ಎಂದು ಸಂದೇಹಪಡಲಾಗದು. ಏಕೆಂದರೆ,–ಕೇವಲ ಅವಿದ್ಯೆಯೋ ಜಗದುಪಾದಾನಕಾರಣವೆ? ಕೇವಲಬ್ರಹ್ಮವೇ? ಅಥವಾ ಎರಡೂ ಸೇರಿಯೊ?—ಎಂಬ ವಿಕಲ್ಪಗಳನ್ನು ಎತ್ತಿ ಕಪಿಲಸೂತ್ರಗಳಲ್ಲಿ ನಿರಾಕರಿಸಿರುತ್ತದೆ. ಇವುಗಳಲ್ಲಿ ಅವಿದ್ಯೆಯನ್ನು ಅವಸ್ತುವಾದ ಅವಿದ್ಯೆಯೆಂದೇ ಹೇಳಬೇಕು; ಇಲ್ಲವಾದರೆ, ಸಾಂಖ್ಯರೂ ಸತ್ಯವಾದ ಪ್ರಧಾನವನ್ನು ಜಗದುಪಾದಾನಕಾರಣವೆಂದು ಒಪ್ಪುವುದರಿಂದ, ಸತ್ಯವಾದಅವಿದ್ಯೆಯನ್ನು ನಿರಾಕರಿಸಿದರೆ, ತಮ್ಮ ಮತಕ್ಕೆ ವಿರುದ್ಧವಾಗುವುದು. ಅಸತ್ಯವಾದ ಪ್ರಕೃತಿಯನ್ನು ರಾಮಾನುಜಾದಿಗಳು ಅಂಗೀಕರಿಸುವುದಿಲ್ಲವಾಗಿ, ಇದು ಕೇವಲಾದ್ವೈತಮತದ ಅನುವಾದವೆಂದೇ ಅವಶ್ಯ ಸಿದ್ಧಿಸುವುದು.

೫. ಈಶ್ವರನನ್ನು ನಿರಾಕರಿಸಿದಮಾತ್ರದಿಂದ ವ್ಯಾಸರ ಮತವನ್ನು ನಿರಾಕರಿಸಿದಂತಾಗುವುದೆಂದು ಹೇಳುವುದೂ ಸಮಂಜಸವಲ್ಲ. ಕಣಾದ, ಗೌತಮ, ಪತಂಜಲಿ—ಮತದವರೂ ಈಶ್ವರನನ್ನು ಅಂಗೀಕರಿಸುವುದರಿಂದ, ಇದು ವ್ಯಾಸರ ಮತದ ನಿರಾಕರಣೆಯೇ—ಎಂದು ಹೇಳಲಾಗುವುದಿಲ್ಲ. ಆಯಾ ಮತಗಳನ್ನು ನಿರಾಕರಿಸುವಾಗ, ಆಯಾಮತಗಳಿಗೆ ಅಸಾಧಾರಣವಾದ ಸಿದ್ಧಾಂತಾರ್ಥಗಳನ್ನೇ ಎತ್ತಿ ನಿರಾಕರಿಸಬೇಕಾದ್ದು ನ್ಯಾಯವು.

೬–೭ 'ವಸ್ತುತ್ವೇ ಸಿದ್ಧಾಂತಹಾನಿಃ'—ಎಂದು ಮುಂತಾಗಿ ಪ್ರಸಿದ್ಧ ಪರಮತದ ಸಿದ್ಧಾಂತವನ್ನು ನಿರಾಕರಿಸಿರುವಲ್ಲಿ, ಯಾರೋ ಅಪ್ರಸಿದ್ಧನಾದವನ ಮತವನ್ನು ನಿರಾಕರಿಸಿರುವರೆಂಬ ಮಾತು ಅನುಚಿತವೇ ಸರಿ.

೮. ಇದರಿಂದಲೇ—ಸೂತಜಡಭರತಾದಿಗಳ ಮತದ ನಿರಾಕರಣೆಯೆಂಬುದೂ ನಿರಾಕರಿಸಲ್ಪಟ್ಟದ್ದಾಗುವುದು. ಏಕೆಂದರೆ, ಸೂತಜಡಭರತಾದಿ

ಗಳು ಸ್ವತಂತ್ರಸಿದ್ಧಾಂತಮತಪ್ರವರ್ತಕರೆಂದು ಎಲ್ಲಿಯೂ ಪ್ರಸಿದ್ಧರಾಗಿ... ಒಂದುವೇಳೆ, ಇವರ ಮತದ ನಿರಾಕರಣೆಯೆಂದೇ ಹೇಳುವುದಾದರೆ, ಅ... ಇವರ ಮತವೇ ಸೂತಸಂಹಿತಾ-ವಿಷ್ಣುಪುರಾಣಗಳ ತಾತ್ಪರ್ಯವೆಂ... ಸ್ಪಷ್ಟವಾಗಿರುವುದರಿಂದಲೂ, ಇತಿಹಾಸಪುರಾಣಗಳಿಂದ ವೇದಾರ್ಥವನ್ನು ನಿಶ್ಚಯಿಸಿಕೊಳ್ಳಬೇಕಾದ್ದರಿಂದಲೂ, ಸೂತಜಡಭರತಾದಿಗಳಿಗೆ ಸಮ್ಮತ... ವಾಗಿರುವ ಅದ್ವೈತಸಿದ್ಧಾಂತವೇ ವೇದಸಿದ್ಧಾಂತವೆಂದು ಸಿದ್ಧಿಸುವುದು.

೯. ಕಪಿಲರು ತಮ್ಮ ಸಿದ್ಧಾಂತದ ಸ್ಥಾಪನೆಗಾಗಿ ಪರಮತಗಳನ್ನು ಸರಿಯಾಗಿ ತಿಳಿದುಕೊಂಡೇ, ಅವುಗಳನ್ನು ಅನುವಾದಮಾಡಿ ನಿರಾಕರಿಸಬೇಕಾಗಿರುವಲ್ಲಿ; ಇತರ ಮತಗಳ ಅರ್ಥಗಳನ್ನು ಹಾಗೆಯೇ ಸರಿಯಾಗಿ ಅನುವಾದಮಾಡಿ ನಿರಾಕರಿಸಿರುವಾಗ; ವ್ಯಾಸರ ಮತವನ್ನು ಅನುವಾದಮಾಡುವಾಗ ಮಾತ್ರ ಭ್ರಾಂತಿಯಿಂದ ತಪ್ಪು ಅರ್ಥವನ್ನು ಅನುವಾದಮಾಡಿ ನಿರಾಕರಿಸಿರುವರೆಂದು ಹೇಳುವುದು ತೀರಾ ಅಯುಕ್ತವೇ ಸರಿ. ಇದು ಹೀಗೆ ಹೇಳುವವರ ಭ್ರಾಂತಿಯನ್ನೇ ವಿಶದಪಡಿಸುವುದು—ಅಷ್ಟೆ!

೧೦. 'ಕಪಿಲರು ಸರ್ವಜ್ಞರಾದ್ದರಿಂದ, ಮುಂದೆ ಶಂಕರಭಗವತ್ಪಾದರು ಬಂದು ಸ್ಥಾಪಿಸುವ ಅದ್ವೈತಮತವನ್ನು ಅನುವಾದಮಾಡಿ ನಿರಾಕರಿಸಿರುವರು' —ಎಂಬ ಕಲ್ಪನೆಯು, ಕಲ್ಪಕರ ಕಲ್ಪನಾ ಕೌಶಲವನ್ನೇ ಕಲ್ಪಿತವೆಂದು ಕಲ್ಪಿಸುವುದು. ಹೀಗಾದಲ್ಲಿ, ಸರ್ವಜ್ಞರಾಗಿದ್ದ ಕಪಿಲರಿಗೆ ಮುಂದೆ ಬಂದ ರಾಮಾನುಜ ಮಧ್ವ—ಮುಂತಾದವರ ದ್ವೈತವಿಶಿಷ್ಟಾದ್ವೈತಾದಿ—ಮತಗಳು ಮಾತ್ರ ತಿಳಿದುಬರಲಿಲ್ಲವೆ? ತಿಳಿದುಬಂದಿದ್ದರೆ, ಆ ಮತಗಳ ಅನುವಾದ ನಿರಾಕರಣೆಗಳನ್ನು ಕಪಿಲರು ಏಕೆ ಮಾಡಿರುವುದಿಲ್ಲ? ಇದಲ್ಲದೆ, ಸಾಂಖ್ಯಸೂತ್ರಕಾರರು ಇತರ ಮತಗಳ ಸೂತ್ರಕಾರರ ಅಭಿಮತಾರ್ಥಗಳನ್ನೇ ಅನುವಾದಿಸಿ ನಿರಾಕರಿಸುವರೇ ಹೊರತು, ಇತರ ಮತಗಳ ಭಾಷ್ಯಕಾರರ ಅಭಿಪ್ರಾಯಗಳನ್ನು ನಿರಾಕರಿಸುವರೆಂಬುದು ಅಯುಕ್ತವು.

ಒಂದುವೇಳೆ ಸರ್ವಜ್ಞರಾದ ಕಪಿಲರು ಮುಂದೆ ಬರುವ ಶಂಕರಭಗವತ್ಪಾದರ ಸಿದ್ಧಾಂತವನ್ನೇ ಅನುವಾದಮಾಡಿ ನಿರಾಕರಿಸಿರುವರೆಂದು ಹೇಳಿದರೆ, ವ್ಯಾಸಸೂತ್ರಗಳ ಮೇಲಿನ ಹಲವಾರು ಭಾಷ್ಯಗಳಿರುವಲ್ಲಿ ಇತರ ಭಾಷ್ಯಗಳ ಅರ್ಥಗಳನ್ನು ಖಂಡನೆಗೂ ಯೋಗ್ಯವಲ್ಲವೆಂದು, ತಿರಸ್ಕರಿಸಿ,

ಶಂಕರಭಗವತ್ಪಾದರ ಸಿದ್ಧಾಂತಾರ್ಥವನ್ನೇ ನಿರಾಕರಿಸಿರುವುದನ್ನು, ಪರಿಶೀಲಿಸಿದರೆ, ಶಂಕರಭಗವತ್ಪಾದರು ಪ್ರತಿಪಾದಿಸಿರುವ ಅದ್ವೈತಸಿದ್ಧಾಂತವೇ ವ್ಯಾಸಸೂತ್ರಗಳಿಗೂ ಸಮ್ಮತವಾದ ಸಿದ್ಧಾಂತವೆಂದು ಅತ್ಯಂತಸ್ಪಷ್ಟವಾಗುವುದು!

೧೧. ವೇದಾಂತೈಕದೇಶಿಗಳ ಮತಗಳ ನಿರಾಕರಣೆಯೆಂಬ ಪಕ್ಷವೂ ಹೇಯವು; ವೇದಾಂತಸಿದ್ಧಾಂತಿಗಳಾಗಿರುವ ವ್ಯಾಸರನ್ನು ಬಿಟ್ಟು, ಅವರ ಏಕದೇಶಿಗಳನ್ನು ಕಪಿಲರು ನಿರಾಕರಿಸುವುದು ಅನುಚಿತವೇ ಸರಿ.

ಒಂದುವೇಳೆ ಇದು ಈ ಏಕದೇಶಿಗಳ ಮತಗಳ ನಿರಾಕರಣೆಯೆಂದೇ ಹೇಳುವುದಾದರೂ;—ಆಶ್ಮರಥ್ಯ, ಔಡುಲೋಮಿ, ಕಾಶಕೃತ್ಸ್ನ, ಬಾದರಿ, ಆತ್ರೇಯ, ಜೈಮಿನಿ, ಕಾರ್ಷ್ಣಾಜಿನಿ, ಬಾದರಾಯಣ—ಎಂಬ ಈ ಮಹರ್ಷಿಗಳ ಹೆಸರುಗಳನ್ನು ಬ್ರಹ್ಮಸೂತ್ರಗಳಲ್ಲಿ ಹೇಳಿರುತ್ತಾರೆ; ಇವರುಗಳಲ್ಲಿ ಕಾಶಕೃತ್ಸ್ನರ ಅಭಿಪ್ರಾಯವನ್ನೇ ಸಿದ್ಧಾಂತವೆಂದು ಎಲ್ಲ ಭಾಷ್ಯಕಾರರೂ ಅಂಗೀಕರಿಸಿರುತ್ತಾರೆ. ಆದರೆ, ಭಗವತ್ಪಾದರನ್ನು ಬಿಟ್ಟು, ಇತರರು ಯಾರೂ ಅದ್ವೈತಸಿದ್ಧಾಂತವನ್ನು ಒಪ್ಪುವುದಿಲ್ಲವಾಗಿ, ಕಪಿಲಸೂತ್ರಗಳಲ್ಲಿರುವ ಅದ್ವೈತಸಿದ್ಧಾಂತಾನುವಾದನಿರಾಕರಣೆಗಳು ಈ ಮತಗಳಿಗೆ ಅನ್ವಯಿಸುವಂತಿಲ್ಲ.

ಈ ಪ್ರಕಾರವಾಗಿ ಕಪಿಲಸೂತ್ರಗಳಲ್ಲಿ ಕೇವಲಾದ್ವೈತಸಿದ್ಧಾಂತದ ಅನುವಾದಪೂರ್ವಕನಿರಾಕರಣೆಯು ಅತ್ಯಂತಸ್ಪಷ್ಟವಾಗಿರುತ್ತ ಇದನ್ನು ಅನ್ಯಥಾಮಾಡಲು ಸಾಧ್ಯವಿಲ್ಲವಾಗಿದೆ; ಇಂಥ ಅದ್ವೈತಸಿದ್ಧಾಂತವಾದಿಯು ಬೇರೆ ಯಾರೂ ಇರುವುದಿಲ್ಲ; ಆಸ್ತಿಕನಾಸ್ತಿಕತಾಂತ್ರಿಕಮತದವರುಗಳಲ್ಲಿ ಯಾರೂ ವ್ಯಾಸರನ್ನು ದ್ವೈತಿಗಳೆಂದು ಹೇಳಿರುವುದಿಲ್ಲ; ವ್ಯಾಸರು ತಮ್ಮ ಬ್ರಹ್ಮಸೂತ್ರಗಳಲ್ಲಿ ಕಪಿಲರ ಸಾಂಖ್ಯಮತವನ್ನು ಸ್ಪಷ್ಟವಾಗಿ ಅನುವದಿಸಿ ನಿರಾಕರಿಸಿರುತ್ತಾರೆ; ಇದರಂತೆ ಕಪಿಲರು ವ್ಯಾಸರ ವೇದಾಂತಮತವನ್ನು ಅನುವದಿಸಿ ನಿರಾಕರಿಸಲೇಬೇಕಾಗಿದೆ; ಈ ಕಾರಣಗಳಿಂದ ವೇದಾಂತಮತಪ್ರವರ್ತಕರಾಗಿರುವ ವ್ಯಾಸರೇ ಈ ಅದ್ವೈತಸಿದ್ಧಾಂತವಾದಿಗಳೆಂದೂ, ಅದ್ವೈತಸಿದ್ಧಾಂತವೇ ಪಾರಮಾರ್ಥಿಕವೇದಾಂತಸಿದ್ಧಾಂತವೆಂದೂ, ನಿರ್ಮತ್ಸರರಾದ ವಿಚಾರಕುಶಲರಿಗೆ ನಿಶ್ಚಿತವಾಗುವುದು.

"ಕಪಿಲರ ಸಾಂಖ್ಯಸಿದ್ಧಾಂತವೇನು; ಅವರು ಅದ್ವೈತಸಿದ್ಧಾಂತವನ್ನು ಹೇಗೆ ಖಂಡಿಸಿದ್ದಾರೆ; ವೇದಾಂತಾದ್ವೈತಸಿದ್ಧಾಂತವು ಎಂತಹುದು—?"

ಮುಂತಾದ ವಿಷಯಗಳನ್ನು ಆಯಾಮತಗಳ ಆಕರಗ್ರಂಥಗಳನ್ನು ಅಧ್ಯಯನ ಮಾಡಿ ತಿಳಿಯತಕ್ಕದ್ದು; ಇದನ್ನು ವಿವರಿಸುವುದು ನಮಗೆ ಇಲ್ಲಿ ಪ್ರಸ್ತುತವಲ್ಲ. 'ವೇದಾಂತಮತಪ್ರವರ್ತಕರಾಗಿರುವ ಬಾದರಾಯಣವ್ಯಾಸರಿಗೆ ಅಭಿಮತವಾಗಿರುವ ಸಿದ್ಧಾಂತವು ಅದ್ವೈತಸಿದ್ಧಾಂತವೇ, ಬೇರೊಂದೂ ಅಲ್ಲ'—ಎಂಬುದನ್ನು ನಿಶ್ಚಯಿಸಿಕೊಡುವುದೇ ನಮಗೆ ಈಗ ಉದ್ದೇಶವಾಗಿದೆ. ಕಪಿಲರ ಸಾಂಖ್ಯಸೂತ್ರಗಳಲ್ಲಿ ಸ್ಪಷ್ಟವಾಗಿರುವ ಅದ್ವೈತಮತದ ಅರ್ಥಗಳ ಅನುವಾದ ನಿರಾಕರಣೆಗಳಿಗೆ ವ್ಯಾಸರಲ್ಲದೆ ಬೇರೆ ಯಾರೂ ವಾದಿಗಳಾಗುವುದಿಲ್ಲವಾಗಿ, ವ್ಯಾಸರಿಗೆ ಅದ್ವೈತಸಿದ್ಧಾಂತವೇ ಸಮ್ಮತವಾಗಿರುವುದೆಂಬುದನ್ನು ಪ್ರತಿಪಾದಿಸುವುದೇ ನಮ್ಮ ಧ್ಯೇಯವು; ಇದುವರೆಗಿನ ವಿಚಾರಗಳಿಂದ ಇದು ಸಿದ್ಧವಾಗಿದೆ!

ಸಾಂಖ್ಯಶಾಸ್ತ್ರದ ಅನುವಾದದ ಪ್ರಮಾಣದ ಬಲದಿಂದ ಅದ್ವೈತಸಿದ್ಧಾಂತವೇ ವ್ಯಾಸರ ತಾತ್ಪರ್ಯಾರ್ಥವೆಂಬುದು ಸಿದ್ಧಿಸಿರುವಂತೆ, ಇತರ ಶಾಸ್ತ್ರಗಳ ವಿಮರ್ಶೆಯಿಂದಲೂ ಈ ಅರ್ಥವೇ ಸಿದ್ಧಿಸುತ್ತದೆ.

ವೇದಾಂತಶಾಸ್ತ್ರದಲ್ಲಿ–'ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ' —ಎಂಬ ಅಧಿಕಾರಣದಲ್ಲಿ ಭಗವದ್ವ್ಯಾಸರು ಕಣಾದಮತವನ್ನು ಅನುವದಿಸಿ ನಿರಾಕರಿಸಿರುತ್ತಾರೆ. ಇದಂತೆಯೇ ವೈಶೇಷಿಕಶಾಸ್ತ್ರದಲ್ಲಿ ಕಣಾದರು ವ್ಯಾಸರ ಮತವನ್ನು ಅದ್ವೈತವೆಂದೇ ಸ್ವೀಕರಿಸಿ ನಿರಾಕರಿಸಿರುತ್ತಾರೆ. ಅಲ್ಲಿ— 'ತಸ್ಮಾದಾಗಮಿಕಂ । ಸುಖದುಃಖಜ್ಞಾನನಿಷ್ಪತ್ತ್ಯವಿಶೇಷಾದೈಕಾತ್ಮ್ಯಂ ಸರ್ವಶರೀರಾಣಾಂ ।'—"ವೈದಿಕಮತವನ್ನು ಪರೀಕ್ಷಿಸುತ್ತೇವೆ; ಸುಖದುಃಖ ಜ್ಞಾನಗಳು ಎಲ್ಲರಿಗೂ ಸಮವಾಗಿರುವುದರಿಂದ, ಆತ್ಮಭೇದಕ್ಕೆ ಕಾರಣವಿಲ್ಲವಾಗಿ, ಆತ್ಮೈಕತ್ವವು ಸಿದ್ಧಿಸುವುದು'—ಎಂದು ಆತ್ಮೈಕತ್ವವೇ ವೈದಿಕ ಸಿದ್ಧಾಂತವೆಂದು ಅನುವಾದಮಾಡಿ; 'ನಾನಾತ್ಮಾನೋ ವ್ಯವಸ್ಥಾತಃ ।'— "ಸುಖದುಃಖಾದಿಗಳು ಪ್ರತಿಯೊಬ್ಬರಲ್ಲಿಯೂ ಬೇರೆಬೇರೆಯೇ ಆಗಿರುವುದರಿಂದ ಆತ್ಮರು ಅನೇಕರು, ಒಬ್ಬನೇ ಅಲ್ಲ"—ಎಂದು ನಿರಾಕರಿಸಿದ್ದಾರೆ.

'ತರ್ಕಾಪ್ರತಿಷ್ಠಾನಾತ್'—ಎಂಬ ಅಧಿಕರಣದಲ್ಲಿ ಭಗವದ್ವ್ಯಾಸರು ಗೌತಮರ ನ್ಯಾಯಮತವನ್ನು ನಿರಾಕರಿಸಿರುತ್ತಾರೆ; ಗೌತಮರೂ ತಮ್ಮ ನ್ಯಾಯಸೂತ್ರಗಳಲ್ಲಿ ಅದ್ವೈತಸಿದ್ಧಾಂತವನ್ನೇ ವೇದಾಂತಸಿದ್ಧಾಂತವೆಂದು ಅಂಗೀಕರಿಸಿ ನಿರಾಕರಿಸಿರುತ್ತಾರೆ.

ವನ್ನು ನಿರಾಕರಿಸಿರುವಂತೆ ಯೋಗಶಾಸ್ತ್ರದಲ್ಲಿಯೂ ಪತಂಜಲಿಗಳು ಅದ್ವೈತ ಮತವನ್ನೇ ವೇದಾಂತಸಿದ್ಧಾಂತವೆಂದು ಅನುವಾದಮಾಡಿ ನಿರಾಕರಿಸಿರುವರು. ಹೇಗೆಂದರೆ–'ಸ್ವರೂಪಪ್ರತಿಷ್ಠಾ ವಾ ಚಿತಿಶಕ್ತಿಃ |'–ಎಂಬ ಯೋಗಸೂತ್ರದ ಭೋಜವೃತ್ತಿಯಲ್ಲಿ—"ಯೇ ತು ವೇದಾಂತಿನಃ ಚಿದಾನಂದಮಯತ್ವ ಮಾತ್ಮನೋ ಮೋಕ್ಷಂ ಮನ್ಯಂತೇ, ತೇಷಾಂ ನ ಯುಕ್ತಃ ಪಕ್ಷಃ | ತಥಾ ಹಿ– ಆನಂದಸ್ಯ ಸುಖರೂಪತ್ವಾತ್, ಸುಖಸ್ಯ ಚ ಸಸ್ಪೈವ ಚ ಸಂವೇದ್ಯತಯೈವ ಪ್ರತಿಭಾಸಾತ್, ಸಂವೇದ್ಯಮಾನತ್ವಂ ಚ ಸಂವೇದನವ್ಯತಿರೇಕೇಣ ಅನುಪ ಪನ್ನಮಿತಿ, ಸಂವೇದನಸಂವೇದ್ಯಯೋರಭ್ಯುಪಗಮಾದದ್ವೈತಹಾನಿಃ |”

'ಮತ್ತೆ ಯಾವ ವೇದಾಂತಿಗಳು ಮೋಕ್ಷದಲ್ಲಿ ಆತ್ಮನು ಚಿದಾನಂದರೂಪ ನಾಗಿರುವನೆಂದು ಹೇಳುವರೋ, ಇದು ಸರಿಯಲ್ಲ. ಏಕೆಂದರೆ, ಸುಖವು ಯಾವಾಗಲೂ ತಿಳಿದುಬರುವಂಥದ್ದೇ ಆಗಿರುತ್ತದೆ; ತಿಳಿದುಬರುವಂಥದ್ದು ತಿಳಿವಿಗೆ ಬೇರೆಯಾಗಿ ಅದಕ್ಕೆ ವಿಷಯವಾಗಿಯೇ ತಿಳಿದುಬರುವುದು; ಹೀಗೆ —ತಿಳಿವು, ತಿಳಿವಿನ ವಿಷಯವಾದ ಸುಖ—ಎಂದು ಎರಡನ್ನು ಒಪ್ಪಬೇಕಾಗಿ, ಅದ್ವೈತಸಿದ್ಧಾಂತದ ಹಾನಿಯೇ ಆಗುವುದು'—ಎಂದು ಮುಂತಾಗಿ ಕೇವಲಾ ದ್ವೈತಸಿದ್ಧಾಂತವನ್ನೇ ವೇದಾಂತಮತವೆಂದು ನಿರೂಪಿಸಿ ನಿರಾಕರಿಸಿರುತ್ತದೆ.

ಹಾಗೆಯೇ—ವೇದಾಂತಶಾಸ್ತ್ರದಲ್ಲಿ ಜೈಮಿನಿಗಳ ಪೂರ್ವಮೀಮಾಂಸಾ ಶಾಸ್ತ್ರವನ್ನು—'ಫಲಮತ ಉಪಪತ್ತೇಃ'—ಎಂದು ಮುಂತಾಗಿ ನಿರಾಕರಿಸಿರು ತ್ತದೆ. ಮೀಮಾಂಸಾಶಾಸ್ತ್ರದಲ್ಲಿಯೂ ಹಾಗೆಯೇ ಅದ್ವೈತವನ್ನೇ ಅನುವಾದ ಮಾಡಿ ವೇದಾಂತಶಾಸ್ತ್ರವನ್ನೂ ನಿರಾಕರಿಸಿರುತ್ತಾರೆ. ಮೀಮಾಂಸಾಸೂತ್ರದ ತರ್ಕಪಾದದಲ್ಲಿ—

"ಸ್ವಯಂ ಚ ಶುದ್ಧರೂಪತ್ವಾದಭಾವಾಚ್ಚಾನ್ಯವಸ್ತುನಃ |
ಸ್ವಪ್ನಾದಿವದವಿದ್ಯಾಯಾಃ ಪ್ರವೃತ್ತಿಸ್ತಸ್ಯ ಕಿಂಕೃತಾ ||
ಅನ್ಯೇನೋಪಪ್ಲವಾಭೀಷ್ಟೇ ದ್ವೈತವಾದಃ ಪ್ರಸಜ್ಯತೇ |
ಸ್ವಾಭಾವಿಕೀಮವಿದ್ಯಾಂ ತು ನೋಚ್ಛೇತ್ತುಂ ಕಿಂಚಿದರ್ಹತಿ ||
ವಿಲಕ್ಷಣೋಪಪಾತೋ ಹಿ ನಶ್ಯೇತ್ಸ್ವಾಭಾವಿಕೀ ಕ್ವಚಿತ್ |
ನ ತ್ವೈಕಾತ್ಮತಾಭ್ಯುಪಾಯಾನಾಂ ಹೇತುರಸ್ತಿ ವಿಲಕ್ಷಣಃ ||”

"ವೇದಾಂತಮತದಲ್ಲಿ ಬ್ರಹ್ಮಾತ್ಮವಸ್ತುವು ಅತ್ಯಂತಶುದ್ಧವೂ ಅದ್ವಿತೀಯವೂ ಆಗಿರುವುದರಿಂದ, ಅದರಿಂದ ಜಗತ್ಸೃಷ್ಟಿಯು ಹೇಗಾಗುವುದು? ಬೇರೆ ವಸ್ತುವನ್ನು ಒಪ್ಪಿದರೆ, ದ್ವೈತವಾದವೇ ಆಗುವುದು; ಅನಾದಿಯಾದ ಅವಿದ್ಯೆಯನ್ನು ಒಪ್ಪಿದರೆ, ಸ್ವಾಭಾವಿಕವಾದ ಈ ಅವಿದ್ಯೆಯನ್ನು ಯಾರೂ ನಾಶ ಮಾಡಲಾರದಾಗುವುದು. ಅವಿದ್ಯೆಗೆ ವಿರೋಧಿಯಾದುದನ್ನು ಅಂಗೀಕರಿಸಿದರೆ, ಅದರಿಂದ ಅವಿದ್ಯೆಯು ನಾಶಹೊಂದೀತೇ ಹೊರತು, ಆತ್ಮೈಕತತ್ತ್ವವನ್ನು ಅಂಗೀಕರಿಸಿದರೆ ಅವಿದ್ಯೆಯು ನಾಶಕ್ಕೆ ಕಾರಣವೇ ಇಲ್ಲವಾಗಿ, ಮೋಕ್ಷವು ಅಸಂಭಾವಿತವಾಗುವುದು"—ಎಂದು ಮುಂತಾಗಿ ಕೇವಲಾದ್ವೈತವನ್ನೇ ಅನುವದಿಸಿ ನಿರಾಕರಿಸಿರುವರು.

ಪಾಣಿನಿಮಹರ್ಷಿಗಳ ವ್ಯಾಕರಣಶಾಸ್ತ್ರದಲ್ಲಿಯೂ ಭರ್ತೃಹರಿಕಾರಿಕೆಯಲ್ಲಿ—"ಯತ್ರ ದ್ರಷ್ಟಾ ಚ ದೃಶ್ಯಂ ಚ ದರ್ಶನಂ ಚಾಪಿ ಕಲ್ಪಿತಂ।
ತಸ್ಯೈವಾರ್ಥಸ್ಯ ಸತ್ಯತ್ವಮಾಹುಸ್ತ್ರಯ್ಯಂತವೇದಿನಃ ॥"

"ವೇದಾಂತಾರ್ಥವನ್ನು ಬಲ್ಲವರು,-ದ್ರಷ್ಟೃ, ದೃಶ್ಯ, ದರ್ಶನ-ಮುಂತಾದ ದ್ವೈತವೆಲ್ಲ ಎಲ್ಲಿ ಕಲ್ಪಿತವಾಗಿದೆಯೋ, ಅಂಥ ಅದ್ವಿತೀಯಬ್ರಹ್ಮವನ್ನೇ ಸತ್ಯ ವಸ್ತುವೆಂದು ಹೇಳುವರು"—ಎಂದು ಹೇಳಿರುತ್ತಾರೆ.

ವೇದಾಂತಶಾಸ್ತ್ರದಲ್ಲಿ-'ಪತ್ಯುರಸಾಮಂಜಸ್ಯಾತ್'-ಎಂದು ಪಾಶುಪತ ಮತವನ್ನು ಭಗವದ್ವ್ಯಾಸರು ನಿರಾಕರಿಸಿರುವಂತೆ, ಶೈವಶಾಸ್ತ್ರದಲ್ಲಿ ಕೇವಲಾದ್ವೈತವೇ ವೇದಾಂತಾಭಿಮತವೆಂದು ಅನುವಾದಮಾಡಿ ನಿರಾಕೃತವಾಗಿದೆ. ಮೃಗೇಂದ್ರಸಂಹಿತೆಯ ಜ್ಞಾನಪಾದದ ಎರಡನೆಯ ಪಟಲದಲ್ಲಿ—

"ವೇದಾಂತೇಷ್ವೇಕ ಏವಾತ್ಮಾ ಚಿದಚಿದ್ವ್ಯಕ್ತಿಲಕ್ಷಿತಃ।
ಆತ್ಮೈವೇದಂಜಗತ್ಸರ್ವಂ ನೇಹ ನಾನಾಸ್ತಿ ಕಿಂಚನ॥
ಪ್ರತಿಜ್ಞಾಮಾತ್ರಮೇವೇದಂ ನಿಶ್ಚಯಃ ಕಿಂನಿಬಂಧನಃ।
ಅಥ ಪ್ರಮಾಣಂ ತತ್ರಾತ್ಮಾ ಪ್ರಮೇಯತ್ವಂ ಪ್ರಪದ್ಯತೇ॥
ಯತ್ರೈತದುಭಯಂ ತತ್ರ ಚತುಷ್ಟಯಮಪಿ ಸ್ಥಿತಂ।
ಅದ್ವೈತಹಾನಿರೇವಂ ಸ್ಯಾನ್ನಿಷ್ಪ್ರಮಾಣಕತಾನ್ಯಥಾ॥"

"ಚೇತನಾಚೇತನವಸ್ತುಗಳಿಂದ ಉಪಲಕ್ಷಿತನಾಗಿರುವ ಆತ್ಮನು ಒಬ್ಬನೇ

ಇರುವವನು; ಈ ಜಗತ್ತೆಲ್ಲ ಆತ್ಮನೇ ಹೊರತು, ಆತ್ಮನಿಗೆ ಬೇರೆಬೇರೆಯಾದ
ವಸ್ತುವಿಲ್ಲ; ಇಲ್ಲಿ ಭೇದವು ಲೇಶಮಾತ್ರವೂ ಇರುವುದಿಲ್ಲ”—ಎಂಬುದು
ವೇದಾಂತಮತವಷ್ಟೆ! ಇದು ಕೇವಲ ಮಾತೋ, ಇಂಥ ಆತ್ಮನಲ್ಲಿ ಪ್ರಮಾಣ
ವೇನಾದರೂ ಇದೆಯೋ? ಪ್ರಮಾಣವಿದೆಯೆಂದು ಹೇಳಿದರೆ, ಆತ್ಮನು ಆ
ಪ್ರಮಾಣಕ್ಕೆ ವಿಷಯನಾಗಿ ಪ್ರಮೇಯನೆನಿಸುವನು. ಹೀಗೆ ಪ್ರಮಾಣ
ಪ್ರಮೇಯಗಳೆಂದು ಎರಡು ವಸ್ತುಗಳು ಸಿದ್ಧವಾದಮೇಲೆ, ಪ್ರಮಾತಾ ಮತ್ತು
ಪ್ರಮಿತಿ—ಎಂದು ಮತ್ತೆರಡೂ ಸಂಭವಿಸುವುವು. ಈ ನಾಲ್ಕನ್ನೂ ಒಪ್ಪಿದರೆ,
ಅದ್ವೈತದ ಹಾನಿಯೇ ಆಗುವುದು. ಈ ದೋಷವನ್ನು ಪರಿಹರಿಸುವುದಕ್ಕೆಂದು,
ಇಂಥ ಆತ್ಮನಲ್ಲಿ ಪ್ರಮಾಣವನ್ನು ಇಲ್ಲವೆಂದು ಹೇಳಿದರೆ, ಆತ್ಮನು
ಅಪ್ರಾಮಾಣಿಕನೇ ಆಗುವನು”—ಎಂದು ಮುಂತಾಗಿ ವೇದಾಂತಸಿದ್ಧಾಂತ
ವನ್ನು ಅದ್ವಿತೀಯಮತವೆಂದೇ ಅಂಗೀಕರಿಸಿ ನಿರಾಕರಿಸಿರುತ್ತದೆ.

ವೇದಾಂತಶಾಸ್ತ್ರದಲ್ಲಿ ಪಾಂಚರಾತ್ರ, ಬೌದ್ಧ, ಜೈನ, ಚಾರ್ವಾಕ—
ಮುಂತಾದಮತಗಳನ್ನೂ ನಿರಾಕರಿಸಿರುತ್ತದೆ; ಇದರಂತೆಯೇ ಆ ಮತಗಳಲ್ಲಿಯೂ
ವೇದಾಂತಮತವನ್ನು ಅದ್ವಿತೀಯಮತವೆಂದೇ ಅನುವದಿಸಿ ನಿರಾಕರಿಸಿರುವು
ದನ್ನು ತಿಳಿಯತಕ್ಕದ್ದು. ಗ್ರಂಥವಿಸ್ತರವಾಗುವ ಭಯದಿಂದಲೂ, ಅನವಶ್ಯಕ
ವಾದ್ದರಿಂದಲೂ, ಇದನ್ನೆಲ್ಲ ಇಲ್ಲಿ ವಿಸ್ತರಮಾಡಿರುವುದಿಲ್ಲ.

ಪಾಂಚರಾತ್ರದ ಪಾದ್ಮಸಂಹಿತೆಯಲ್ಲಿ—“ಪರಕ್ಷೇತ್ರಜ್ಞಯೋರೈಕ್ಯ
ಮಾತ್ಮನಃ ಶ್ರುತಿಚೋದಿತಂ। ಕ್ಷೇತ್ರಜ್ಞಸ್ಯ ಬಹುತ್ವಂ ಹಿ ದೇಹಭೇದಾತ್
ಪ್ರತೀಯತೇ॥ ಏಕಸ್ಯೈವ ತು ಬಿಂಬಸ್ಯ ದರ್ಪಣೇಷು ಯಥಾ ಭಿದಾ।”—
“ಜೀವ ಮತ್ತು ಪರಮಾತ್ಮರ ಏಕತ್ವವೇ ಶ್ರುತಿಬೋಧಿತವಾದುದು; ಒಂದೇ
ಬಿಂಬವಸ್ತುವು ಅನೇಕಕನ್ನಡಿಗಳಲ್ಲಿ ಬೇರೆಬೇರೆಯಾಗಿಯೂ ಅನೇಕವಾಗಿಯೂ
ತೋರಿಬರುವಂತೆ, ಒಬ್ಬ ಆತ್ಮನೇ ದೇಹೋಪಾಧಿಗಳ ಭೇದದಿಂದ ಅನೇಕ
ನಾಗಿ ಕಂಡುಬರುತ್ತಾನೆ”—ಎಂದು, ಅದ್ವೈತತತ್ತ್ವವೇ ಶ್ರುತ್ಯರ್ಥವೆಂಬುದು
ಸ್ಪಷ್ಟಪಡಿಸಲ್ಪಟ್ಟಿದೆ. ಹೀಗೆ ಅದ್ವೈತವು ಶ್ರುತಿಸಮ್ಮತವೆಂಬುದು ಪಾಂಚ
ರಾತ್ರಾಗಮದಿಂದಲೂ ಸ್ಪಷ್ಟವಾಗಿರುವಾಗ, ಪಾಂಚರಾತ್ರಾಗಮವನ್ನು
ಪ್ರಮಾಣವನ್ನಾಗಿ ಅಂಗೀಕರಿಸಿರುವಮಾಧ್ವರಾಮಾನುಜೀಯರು ತಮ್ಮ
ದ್ವೈತ-ವಿಶಿಷ್ಟಾದ್ವೈತಮತಗಳನ್ನು ವೇದಾಂತಸಿದ್ಧಾಂತವೆಂದು ಅಭಿಮಾನ

ಪಡುವುದು ಆಶ್ಚರ್ಯವೆ!

ಎಲ್ಲ ವೇದಾಂತಗಳ ತಾತ್ಪರ್ಯಾರ್ಥವನ್ನು ಶ್ರುತಿಕಾರಿಗಳ ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಅದ್ವೈತಸಿದ್ಧಾಂತವೇ ತಾತ್ಪರ್ಯವಾದುದೆಂದು ಈ ರೀತಿಯಿಂದ ಸ್ಪಷ್ಟವಾದಮೇಲೆ, ಎಲ್ಲ ಉಪನಿಷತ್ತುಗಳಿಗೂ, ಸ್ಮೃತಿ, ಇತಿಹಾಸ, ಪುರಾಣಗಳಿಗೂ ಇದೇ ಸಿದ್ಧಾಂತವೆಂದು ನಿಶ್ಚಿತವೇ ಆಗುವುದು.

ಶ್ರೀಮದ್ಭಗವದ್ಗೀತೆಯಲ್ಲಿ ಎರಡನೆಯ ಅಧ್ಯಾಯದಲ್ಲಿ ಶ್ರೀಭಗವಂತನು ಅರ್ಜುನನನು ಶೋಕಪಟ್ಟ ಜೀವನ ಸ್ವರೂಪವನ್ನು ತಿಳಿಸುತ್ತ—"ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ। ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ॥"—ಎಂಬ ವಿಶೇಷಣಗಳಿಂದ ಜೀವನ ಸ್ವರೂಪವನ್ನು ವಿವರಿಸಿರುತ್ತಾನೆ. ಹನ್ನೆರಡನೆಯ ಅಧ್ಯಾಯದಲ್ಲಿ-ಅವ್ಯಕ್ತವಾದ ಪರಮಾತ್ಮನ ಪಾರಮಾರ್ಥಿಕಸ್ವರೂಪವನ್ನು ವಿವರಿಸುತ್ತ—"ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ। ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಂ ॥"—ಎಂದು ಶಬ್ದ ಮತ್ತು ಅರ್ಥಗಳಿಂದ ಇದೇ ಎಂಟು ವಿಶೇಷಣಗಳಿಂದ ವಿವರಿಸಿರುತ್ತಾನೆ. ಸರ್ವಗತವಾದ ಇಂಥ ವಸ್ತುಗಳು ಎರಡು ಇರುವಂತಿಲ್ಲವಾಗಿ, ಜೀವಬ್ರಹ್ಮೈಕ್ಯವೆ ಗೀತಾರ್ಥವೆಂದು ವಿಶದವಾಗುವುದು.

ಹದಿಮೂರನೆಯ ಅಧ್ಯಾಯದಲ್ಲಿ, ಜ್ಞೇಯವಾಗಿರುವ ಪರಮಾತ್ಮನ ಸ್ವರೂಪವನ್ನು ವರ್ಣಿಸುವಲ್ಲಿ—"ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ।'—ಎಂದು—'ಅದು ಸರ್ವವಿಭಾಗರಹಿತವಾದ ಅಖಂಡಾದ್ವಿತೀಯ ಸ್ವರೂಪ'ವೆಂದು ತಿಳಿಸಿದೆ. ಹದಿನೆಂಟನೆಯ ಅಧ್ಯಾಯದಲ್ಲಿ—"ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ। ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ ॥"—ಎಂದು, ಈ ರೀತಿಯಾದ ಅದ್ವಿತೀಯತತ್ತ್ವದ ತಿಳಿವನ್ನೇ ಸಾತ್ವಿಕವೆಂದು ಹೇಳಿರುತ್ತದೆ.

"ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ। ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ। ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ।

ಪಶ್ಯತ್ಯಕೃತ ಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ || ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ | ಯಃ ಪಶ್ಯತಿ ತಥಾತ್ಮಾನಮ ಕರ್ತಾರಂ ಸ ಪಶ್ಯತಿ ||"—ಮುಂತಾದ ಗೀತಾವಚನಗಳು ಆತ್ಮನನ್ನು ಅವಿಕಾರಿಯೆಂದೂ, ಆದ್ದರಿಂದ ಕರ್ತೃತ್ವಭೋಕ್ತೃತ್ವರೂಪವಾದ ಸರ್ವ ಸಂಸಾರರಹಿತವಾದ ನಿತ್ಯಮುಕ್ತಪರಬ್ರಹ್ಮಸ್ವರೂಪನೆಂದೂ ವ್ಯಕ್ತಪಡಿಸುತ್ತವೆ. ಹೀಗಿರುವಲ್ಲಿ, ಪರಮಾತ್ಮನನ್ನು ನಿತ್ಯಸ್ವತಂತ್ರಕರ್ತೃವೆಂದೂ ಜೀವರನ್ನು ನಿತ್ಯಪರತಂತ್ರಕರ್ತೃಗಳೆಂದೂ ತಿಳಿಯುವವರು—"ನ ಸ ಪಶ್ಯತಿ ದುರ್ಮತಿಃ"—ಎಂಬ ಗೀತಾವಚನಕ್ಕೆ ಪಾತ್ರರೇ ಸರಿ. 'ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ || ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ||'—ಎಂಬ ಗೀತಾವಚನವೂ ಈ ಅರ್ಥದಲ್ಲಿ ಸ್ಪಷ್ಟಾರ್ಥವೇ ಆಗಿದೆ.

ಶ್ರೀಮದ್ಭಾಗವತಪುರಾಣವನ್ನು ಶ್ರೀಬ್ರಹ್ಮಸೂತ್ರಗಳ ವ್ಯಾಖ್ಯಾನವೆಂದೇ ಭಾವಿಸುವರು. ಶ್ರೀಭಾಗವತಪುರಾಣದಲ್ಲಿ ಹನ್ನೆರಡನೆಯ ಸ್ಕಂಧದ ಹನ್ನೊಂದನೆಯ ಅಧ್ಯಾಯದಲ್ಲಿ—"ಬದ್ಧೋ ಮುಕ್ತ ಇತಿ ವ್ಯಾಖ್ಯಾ ಗುಣತೋ ಮೇ ನ ವಸ್ತುತಃ| ಗುಣಸ್ಯ ಮಾಯಾಮೂಲತ್ವಾನ್ನ ಮೇ ಮೋಕ್ಷೋ ನ ಬಂಧನಂ || ಸ್ವಪ್ನೇ ಯಥಾತ್ಮನಃ ಖ್ಯಾತಿಃ ಸಂಸೃತಿರ್ನ ತು ವಾಸ್ತವೀ ||"—ಎಂದು ಪರಮಾತ್ಮನಿಗೇ ಮಾಯಾಗುಣಗಳ ಉಪಾಧಿಯಿಂದ ಬಂಧಮೋಕ್ಷಗಳ ವ್ಯವಹಾರವೆಂದೂ, ಸಂಸಾರವು ಮಾಯಿಕವಾಗಿರುತ್ತ ವಾಸ್ತವವಲ್ಲವೆಂದೂ ಪ್ರತಿಪಾದಿಸಿರುತ್ತೆ. ಆರನೆಯ ಸ್ಕಂಧದ ಹದಿನಾರನೆಯ ಅಧ್ಯಾಯದಲ್ಲಿ—"ಏತಾವಾನೇವ ಮನುಜೈರ್ಯೋಗನೈಪುಣ್ಯಬುದ್ಧಿಭಿಃ| ಸ್ವಾರ್ಥಃ ಸರ್ವಾತ್ಮನಾ ಜ್ಞೇಯೋ ಯತ್ಪರಾತ್ಮೈಕತ್ವದರ್ಶನಂ ||'—ಎಂದು, ಪರಮಾತ್ಮೈಕತ್ವದರ್ಶನವೇ ಪರಮಾರ್ಥವೆಂದು ವ್ಯಕ್ತಮಾಡಲ್ಪಟ್ಟಿದೆ. ಹಾಗೆಯೇ ಹನ್ನೆರಡನೆಯ ಸ್ಕಂಧದ ಕಡೆಯ ಹದಿಮೂರನೆಯ ಅಧ್ಯಾಯದಲ್ಲಿ, ಶ್ರೀಭಾಗವತಪುರಾಣದ ಪರಮತಾತ್ಪರ್ಯಾರ್ಥವನ್ನು ತಿಳಿಸುತ್ತ—"ಸರ್ವವೇದಾಂತಸಾರಂ ಯದ್ಬ್ರಹ್ಮಾತ್ಮೈಕತ್ವಲಕ್ಷಣಂ| ವಸ್ತ್ವದ್ವಿತೀಯಂ ತನ್ನಿಷ್ಠಂ ಕೈವಲ್ಯೈಕಪ್ರಯೋಜನಂ ||"—"ಸರ್ವವೇದಾಂತಗಳ ಸಾರವಾದ ಅರ್ಥವು ಮೋಕ್ಷಫಲವನ್ನು ಸಿದ್ಧಿಸಿಕೊಡುವ ಅದ್ವಿತೀಯಬ್ರಹ್ಮಾತ್ಮೈಕತ್ವವೇ;

ಶ್ರೀಭಾಗವತಪುರಾಣವು ಈ ತತ್ತ್ವಾರ್ಥದಲ್ಲಿಯೇ ನಿಷ್ಠವಾಗಿದೆ"—ಎಂದು ವೇದಾಂತಸಿದ್ಧಾಂತವನ್ನು ಕೇವಲಾದ್ವೈತಸಿದ್ಧಾಂತವೆಂದೂ, ಭಾಗವತ ಪುರಾಣಕ್ಕೂ ಇದೇ ತಾತ್ಪರ್ಯವೆಂದೂ ಉಪಸಂಹಾರಮಾಡಿರುತ್ತದೆ.

ಶ್ರೀವಿಷ್ಣುಪುರಾಣದಲ್ಲಿಯೂ, ಆರನೆಯ ಅಂಶದಲ್ಲಿ—"ತದ್ಭಾವಭಾವ ಮಾಪನ್ನಸ್ತಥಾಸೌ ಪರಮಾತ್ಮನಃ। ಭವತ್ಯಭೇದೀ ಭೇದಸ್ತು ತಸ್ಯಾಜ್ಞಾನ ಕೃತೋ ಭವೇತ್ ॥ ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ। ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ॥"—ಎಂದು ಮುಂತಾಗಿ ಬ್ರಹ್ಮಾತ್ಮೈಕ್ಯವನ್ನೇ ಪಾರಮಾರ್ಥಿಕವೆಂದೂ, ಭೇದವನ್ನು ಅಜ್ಞಾನಕೃತವೆಂದೂ, ದ್ವೈತವೆಲ್ಲ ಭ್ರಾಂತಿಯೆಂದೂ ಸ್ಪಷ್ಟವಾಗಿಹೇಳಿರುತ್ತದೆ.

ಇದುವರೆಗೆ ವಿವರಿಸಿರುವಂತೆ, ಕಪಿಲಾದಿಗಳ ಸೂತ್ರಗಳ ಅನುವಾದ ಸಹಿತಗಳಾದ ಶ್ರುತಿಸ್ಮೃತೀತಿಹಾಸಪುರಾಣಗಳಿಗೆ ಕೇವಲಾದ್ವೈತತತ್ತ್ವ ದಲ್ಲಿಯೇ ಪರಮತಾತ್ಪರ್ಯವೆಂದು ನಿರ್ಧರವಾಗಿರುತ್ತದೆ. ಆದ್ದರಿಂದ— "ಸತ್ಯಾದ್ವೈತಪರಃ ಕಶ್ಚಿದ್ವೇದಭಾಗಃ ಸನಾತನಃ। ಕಲ್ಪಿತದ್ವೈತನಿಷ್ಠಸ್ತು ವೇದಭಾಗೋಽಪರೋ ದ್ವಿಜಾಃ ॥" ಎಂದು ಶ್ರೀಮತ್ಸೂತಸಂಹಿತೆಯ ವಚನಾನುಸಾರವಾಗಿ, ಶ್ರುತ್ಯಾದಿಗಳಲ್ಲಿ ಅಲ್ಲಲ್ಲಿರುವ ಭೇದಪ್ರತಿಪಾದಕಗಳಾದ ವಚನಗಳನ್ನು ಕಲ್ಪಿತದ್ವೈತಪರಗಳೆಂದು ತಿಳಿಯತಕ್ಕದ್ದು. ಆದ್ದರಿಂದ, ಸಾಕ್ಷಾತ್ಪರಮೇಶ್ವರನ ಅವತಾರರೂ, ಸರ್ವಜ್ಞರಾಗಿ ಸಕಲಶ್ರುತಿಸೂತ್ರ ಸ್ಮೃತೀತಿಹಾಸಪುರಾಣಾಗಮಸಂಹಿತಾದಿಗಳ ಪರಮತಾತ್ಪರ್ಯಾರ್ಥವನ್ನು ನಿಶ್ಚಯಿಸುವುದರಲ್ಲಿ ಸಮರ್ಥರೂ ಆಗಿರುವ ಶ್ರೀಮಚ್ಛಂಕರಭಗವತ್ಪಾದರವರು, ಶ್ರುತಿ, ಸೂತ್ರ, ಗೀತೆ, ಸನತ್ಸುಜಾತೀಯ, ವಿಷ್ಣುಸಹಸ್ರನಾಮ—ಮುಂತಾದ ಭಾಷ್ಯಗಳಲ್ಲಿ ಕೇವಲಾದ್ವೈತವನ್ನೇ ಪರಮಾರ್ಥವೆಂದು ಅತ್ಯಂತಸ್ಪಷ್ಟವಾಗಿ ಪ್ರತಿಪಾದಿಸಿರುತ್ತಾರೆ. ಆದಿತ್ಯಪುರಾಣದಲ್ಲಿ ಈ ಅರ್ಥವನ್ನು ಹೇಳಿರುತ್ತದೆ— "ವ್ಯಾಕುರ್ವನ್ವ್ಯಾಸಸೂತ್ರಾಣಿ ಶ್ರುತೇರರ್ಥಂ ಯಥೋಚಿವಾನ್। ಸ ಏವಾರ್ಥಃ ಶ್ರುತೇರ್ಗ್ರಾಹ್ಯಃ ಶಂಕರಃ ಸವಿತಾನನಃ॥"—"ಶ್ರೀಶಂಕರರು ವ್ಯಾಸಸೂತ್ರಗಳನ್ನು ವ್ಯಾಖ್ಯಾನಮಾಡಿ ಯಾವ ಅರ್ಥವನ್ನು ಪ್ರತಿಪಾದಿಸಿರು ವರೋ, ಅದನ್ನೇ ಶ್ರುತಿಯ ತಾತ್ಪರ್ಯವಾದ ಪರಮಾರ್ಥತತ್ತ್ವವೆಂದು ಗ್ರಹಿಸಬೇಕು"—ಎಂದು

ಕೂರ್ಮಪುರಾಣದಲ್ಲಿಯೂ—'ಕರಿಷ್ಯತ್ಯವತಾರಾಣಿ ಶಂಕರೋ ನೀಲ ಲೋಹಿತಃ। ಶ್ರೌತಸ್ಮಾರ್ತಪ್ರತಿಷ್ಠಾರ್ಥಂ ಭಕ್ತಾನಾಂ ಹಿತಕಾಮ್ಯಯಾ॥ ಉಪದೇಕ್ಷ್ಯತಿ ತಚ್ಛಾಸ್ತ್ರಂ ಯಜ್ಞಾನಂ ಬ್ರಹ್ಮಸಂಜ್ಞಿತಂ ॥'—'ಶ್ರೀ ಪರಮೇಶ್ವರನು ಶ್ರೌತಸ್ಮಾರ್ತಪ್ರತಿಷ್ಠಾಪನೆಗಾಗಿ ಅವತರಿಸಿಬಂದು ಬ್ರಹ್ಮಶಾಸ್ತ್ರವನ್ನು ಉಪದೇಶಿಸುವನು'—ಎಂದು ತಿಳಿಸಿರುತ್ತೆ.

ಕೇವಲಾದ್ವೈತವೇ ಪರಮತಾತ್ಪರ್ಯಾರ್ಥವೆಂದು ಹೇಳಿದರೂ, ಇತರ ಇವನ್ನು ನಿರಾಕರಿಸಿ ಬೇರೆಬೇರೆ ಸಿದ್ಧಾಂತಗಳನ್ನು ಪ್ರತಿಪಾದಿಸಿರುವ ಇತರ ಕಪಿಲಕಣಾದಾದಿಮತಗಳನ್ನು ನಿರಾಕರಿಸಿ ಅದ್ವೈತವನ್ನು ಸ್ಥಾಪಿಸುವುದಕ್ಕಾಗಿ ನಾವು ಇಲ್ಲಿ ಹೊರಟಿರುವುದಿಲ್ಲ. ಮತ್ತೇನೆಂದರೆ, ವ್ಯಾಸಸೂತ್ರಗಳ ತಾತ್ಪರ್ಯಾರ್ಥವು ಯಾವುದೆಂಬ ವಿಷಯದಲ್ಲಿ ವಾದಿಗಳ ಭಿನ್ನಾಭಿಪ್ರಾಯಗಳಿಂದ ಸಂದೇಹವು ಸಂಭವಿಸಿರುವಾಗ, ಕಪಿಲಾದಿಗಳ ಅದ್ವೈತಸಿದ್ಧಾಂತದ ಅನುವಾದದ ಬಲದಿಂದ ಕೇವಲಾದ್ವೈತವೇ ವೇದಾಂತಸಿದ್ಧಾಂತವೆಂಬುದನ್ನು ನಿರ್ಣಯಿಸುವುದೇ ನಮ್ಮ ಪ್ರಕೃತ ಉದ್ದೇಶವಾಗಿದೆ—ಅಷ್ಟೆ! ಕಪಿಲಕಣಾದಾದಿ ಇತರಮತಗಳು ಅಸಮಂಜಸಗಳೆಂಬುದನ್ನು ಭಾಷ್ಯಾದಿಗಳಲ್ಲಿ ಪ್ರತಿಪಾದಿಸಿಯೇ ಇರುತ್ತದೆಯಾಗಿ, ಇದನ್ನು ನಾವು ಬೇರೆಯಾಗಿ ಮಾಡಬೇಕಾದ್ದೂ ಇಲ್ಲ.

ಶ್ರುತಿಗೆ ಅದ್ವಿತೀಯತತ್ತ್ವದಲ್ಲಿಯೇ ತಾತ್ಪರ್ಯವೆಂಬುದನ್ನು ಶ್ರೀಮತ್ಸೂತಸಂಹಿತೆಯಲ್ಲಿ ವಿಶದಪಡಿಸಿರುತ್ತೆ—

"ದ್ವಿತೀಯಾದ್ವೈ ಭಯಂ ಜಂತೋರ್ಭವತೀತ್ಯಾಹ ಹಿ ಶ್ರುತಿಃ। ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ॥ ಇತಿ ಚಾಹ ಹಿ ಸಾ ಸಾಧ್ವೀ ಶ್ರುತಿರದ್ವೈತವಾಸ್ತಿಕಾಃ। ಏಕತ್ವಮಿತಿ ವಾಕ್ಯಾರ್ಥೋ ನಾಪರೋ ಮುನಿಸತ್ತಮಾಃ॥ ಸ್ತುತಿನಿಂದೇ ವಿರುಧ್ಯೇತೇ ಯದಿ ಭೇದೋ ವಿವಕ್ಷಿತಃ॥" —"ದ್ವೈತವಸ್ತುವಿನಿಂದ ಭಯವೇ ಉಂಟಾಗುವುದು, ಆತ್ಮೈಕತ್ವದಲ್ಲಿ ಶೋಕಮೋಹಗಳಿಗೆ ಅವಕಾಶವೆಲ್ಲಿ?—ಎಂದು ಶ್ರುತಿಯು ಸ್ಪಷ್ಟವಾಗಿ ಬೋಧಿಸುತ್ತದೆ. ಆದಕಾರಣ ಅದ್ವಿತೀಯಾತ್ಮತತ್ತ್ವವೇ ಪರಮಾರ್ಥವು. ಭೇದವನ್ನು ಸತ್ಯವೆಂದು ಹೇಳಿದರೆ, ಶ್ರುತಿಯಲ್ಲಿ ಹೇಳಿರುವ ಭೇದದ ನಿಂದೆ ಮತ್ತು ಏಕತ್ವದ ಸ್ತುತಿ—ಇವೆರಡಕ್ಕೂ ವಿರೋಧವಾಗುವುದು"—ಎಂದು.

"ಆದರೂ, ಕಪಿಲಕಣಾದರೇ ಮೊದಲಾದ ಮಹರ್ಷಿಗಳೆಲ್ಲರೂ ಸರ್ವಜ್ಞರಾಗಿದ್ದು, ಇವರೆಲ್ಲರೂ ದ್ವೈತವನ್ನೇ ಪ್ರತಿಪಾದಿಸಿರುವುದರಿಂದ, ಬಹುಜನರಿಗೆ ಸಮ್ಮತವಾದ ದ್ವೈತವೇ ಯಥಾರ್ಥವೆಂದು ಅಂಗೀಕರಿಸುವುದು ಯುಕ್ತವಲ್ಲವೆ? 'ಕುರುಡರು ನೂರಾರುಮಂದಿ ಸೇರಿದರೂ ದಾರಿಕಾಣಲಾರರು'—ಎಂಬ ನ್ಯಾಯದಂತೆ, ಇವರೆಲ್ಲರನ್ನೂ ಅಜ್ಞಾನಿಗಳೆಂದು ಹೇಳಲಾದೀತೆ?"—ಎಂದರೆ; ಪ್ರಕೃತಿ, ಪರಮಾಣುಗಳು—ಮುಂತಾಗಿ ಜಗತ್ಕಾರಣವಸ್ತುವನ್ನು ಬೇರೆಬೇರೆಯಾಗಿ ಪ್ರತಿಪಾದಿಸಿರುವ ಈ ಮತಗಳಲ್ಲಿ ಬಹುಸಮ್ಮತಿಯೆಂಬುದೇ ಇರುವುದಿಲ್ಲ. ಆದ್ದರಿಂದಲೇ—"ಕಪಿಲೋ ಯದಿ ಸರ್ವಜ್ಞಃ ಕಣಾದೋ ನೇತಿ ಕಾ ಪ್ರಮಾ। ತಾವುಭೌ ಯದಿ ಸರ್ವಜ್ಞೌ ಮತಭೇದಃ ಕಥಂ ತಯೋಃ ॥"—"ಕಪಿಲರನ್ನು ಸರ್ವಜ್ಞರೆಂದು ಹೇಳುವುದಾದರೆ, ಕಣಾದರನ್ನು ಅಲ್ಲವೆಂದು ಹೇಳುವುದಕ್ಕೆ ಕಾರಣವೇನಿದೆ? ಹಾಗಿಲ್ಲದೆ, ಇವರೀರ್ವರನ್ನೂ ಸರ್ವಜ್ಞರೆಂದು ಹೇಳಿದರೆ, ಇವರಲ್ಲಿ ಮತಭೇದವು ಹೇಗೆ ಸಂಭವಿಸಿತು?" ಎಂಬ ಲೋಕೋಕ್ತಿಯು ಪ್ರಸಿದ್ಧವೇ ಇದೆ.

ಸರ್ವಜ್ಞರೆಂದು ಪ್ರಸಿದ್ಧರಾಗಿರುವ ಕಪಿಲಕಣಾದಾದಿಮಹರ್ಷಿಗಳಿಗೆಲ್ಲ ಒಂದು ಸಿದ್ಧಾಂತವನ್ನೇ ಸಮ್ಮತವೆಂದು ಅವಶ್ಯ ಅಂಗೀಕರಿಸಬೇಕು. ಹೀಗಲ್ಲದೆ, ಪರಸ್ಪರವಿರುದ್ಧಾರ್ಥಗಳಲ್ಲಿ ಅಭಿನಿವೇಶವಿರುವ ಇವರೆಲ್ಲರೂ ಭ್ರಾಂತರೆಂದೇ ಆಗುವರು. "ಕಣಾದಸ್ಯಾಕ್ಷಪಾದಸ್ಯ ವ್ಯಾಸಸ್ಯ ಕಪಿಲಸ್ಯ ಚ। ಪತಂಜಲೇರ್ಜೈಮಿನೇಶ್ಚ ದರ್ಶನಾನಿ ಭವಂತಿ ಷಟ್ ॥"—ಎಂಬ ಆರು ದರ್ಶನಗಳಲ್ಲಿ, ಯಾವುದನ್ನು ಒಪ್ಪಿದರೆ ಇವರೆಲ್ಲರೂ ಅಭ್ರಾಂತರೆನಿಸಿಯಾರೋ, ಅಂಥ ದರ್ಶನವನ್ನೇ ಪರಮಾರ್ಥವೆಂದು ಅವಶ್ಯ ಸಿದ್ಧಿಸುವುದು. ಪಾರಮಾರ್ಥಿಕತತ್ತ್ವದ ವಿಷಯದಲ್ಲಿ ಶ್ರುತಿಯೊಂದೇ ಪ್ರಮಾಣವಾಗಿರುವುದರಿಂದಲೂ, ದ್ವೈತವು ಶ್ರುತಿನಿಂದಿತವಾಗಿರುವುದರಿಂದಲೂ, ಅದನ್ನು ಅಂಗೀಕರಿಸಿದರೆ ಈ ಮಹರ್ಷಿಗಳೆಲ್ಲರೂ ಭ್ರಾಂತರೆಂದೇ ಆಗುವುದರಿಂದಲೂ, ವ್ಯಾಸಮಹರ್ಷಿಗಳಿಗೆ ಸಮ್ಮತವಾಗಿರುವ ಕೇವಲಾದ್ವೈತವೇ ಸಕಲಮುನಿಗಳಿಗೂ ಸಮ್ಮತವೆಂಬಲ್ಲಿ ವಿವಾದವಿರುವಂತಿಲ್ಲ.

ವಸ್ತುತಃ ವಿಚಾರಮಾಡಿ ನೋಡಿದರೆ, ಕಪಿಲಕಣಾದಾದಿಮಹರ್ಷಿಗಳಿಗೆಲ್ಲರಿಗೂ ಕೇವಲಾದ್ವೈತವೇ ಸಮ್ಮತವೆಂಬುದು ಪುರಾಣಾದಿಗಳಿಂದ ಸ್ಪಷ್ಟ

ಪಡುತ್ತದೆ. ಶ್ರೀಮದ್ಭಾಗವತದ ಮೂರನೆಯ ಸ್ಕಂಧದಲ್ಲಿ—"ಜ್ಞಾನಮಾತ್ರಂ ಪರಂ ಬ್ರಹ್ಮ ಪರಮಾತ್ಮೇಶ್ವರಃ ಪುಮಾನ್ | ದೃಶ್ಯಾದಿಭಿಃ ಪೃಥಗ್ಭಾವೈರ್ಭಗವಾನೇಕ ಈಯತೇ || ಜ್ಞಾನಮೇಕಂ ಪರಾಚೀನೈರಿಂದ್ರಿಯೈರ್ಬ್ರಹ್ಮ ನಿರ್ಗುಣಂ | ಅವಭಾತ್ಯರ್ಥರೂಪೇಣ ಭ್ರಾಂತ್ಯಾ ಶಬ್ದಾದಿಧರ್ಮಿಣಾ ||" —ಇವೇ ಮೊದಲಾದ ಕಪಿಲರ ಮಾತುಗಳಿಂದ ಕೇವಲಾದ್ವೈತವೇ ಅವರಿಗೆ ಸಮ್ಮತವೆಂದು ವಿಶದವಾಗುವುದು.

ಹಾಗೆಯೇ ಬ್ರಹ್ಮವೈವರ್ತಪುರಾಣದಲ್ಲಿ—"ನಮೋ ಜಪ್ಯೇಶ್ವರೇಶಾಯ ಸ್ವಾನ್ಯಹೀನಾಯ ಶಂಭವೇ | ತತ್ತ್ವಾನಾಂ ಪರತತ್ತ್ವಾಯ ಸ್ವಯಂಭಾನಾಯ ಹೇತವೇ || ಚಿಚ್ಛಕ್ತಿರ್ಜಡಶಕ್ತಿಶ್ಚ ತತ್ತ್ವಾರ್ಯಾಣಿ ಚ ತದ್ಭಿದಾ | ತತ್ತ್ವತೋ ಯತ್ಸ್ವರೂಪಂ ಹಿ ವಿದ್ಯತೇ ನ ಪೃಥಕ್ತ್ವತಃ || ಉತ್ತಮಾ ಮಧ್ಯಮಾ ಹೀನಾ ಯೇ ಚ ಜೀವಾಃ ಪೃಥಗ್ವಿಧಾಃ | ತತ್ತ್ವತೋ ನಾತಿರಿಚ್ಯಂತೇ ಯಸ್ಮಾತ್ಸಾಂಬಾನ್ಮಹೇಶ್ವರಾತ್ || ಯತ್ಸತ್ತಾ ಜಗತಃ ಸತ್ತಾ ಯತ್ಸತ್ತಾಂ ನ ವಿನಾ ಜಗತ್ | ಯಸ್ಯ ಭಾಸಾ ಜಗದ್ಭಾನಂ ಯಂ ವಿನಾ ನ ಜಗತ್ಪೃಥಕ್ || ಯದಾನಂದೋಽಖಿಲಾನಂದೋ ವಿಭಾತಿ ಸ್ವಯಮೇವ ಹಿ | ಯಃ ಶಿವಃ ಪರಮಾನಂದೋ ವರ್ತತೇ ಸರ್ವಜಂತುಷು ||"—ಇವೇ ಮೊದಲಾದ ವಚನಗಳಿಂದ ಗೌತಮಮಹರ್ಷಿಗಳಿಗೂ ಅದ್ವಿತೀಯಪರಶಿವತತ್ತ್ವವೇ ಸಮ್ಮತವೆಂದು ಸ್ಪಷ್ಟವು.

ಶಿವಪುರಾಣದ ಏಕಾದಶರುದ್ರಸಂಹಿತೆಯಲ್ಲಿ, ತನಗೆ ಮುಕ್ತಿಗೆ ಉಪಾಯವನ್ನು ಉಪದೇಶಿಸಬೇಕೆಂದು ಜೈಮಿನಿಮುನಿಗಳು ಶ್ರೀವ್ಯಾಸಮುನಿಗಳನ್ನು ಪ್ರಾರ್ಥಿಸಿದಾಗ—"ಜ್ಞಾನಾದೇವ ವಿಮುಕ್ತಿಃ ಸ್ಯಾನ್ನಾನ್ಯಥಾ ಕರ್ಮಕೋಟಿಭಿಃ | ಜ್ಞಾನಂ ವೇದಾಂತಜಂ ಜ್ಞಾನಮಜ್ಞಾನಂ ಚಾನ್ಯದಿಷ್ಯತೇ || ಜೀವಬ್ರಹ್ಮೈಕ್ಯವಿಷಯಂ ತದೇವ ಸ್ಯಾನ್ನ ಚೇತರತ್ | ತಚ್ಚ ಶಂಭೋಃ ಪ್ರಸಾದೇನ ಗುರೋಶ್ಚೈವ ಪ್ರಸಾದತಃ | ತಥಾ ವೇದಾಂತವಾಕ್ಯಾನಾಂ ತಾತ್ಪರ್ಯಸ್ಯ ವಿಚಾರಣಾತ್ | ಜಾಯತೇ ತಚ್ಛಿವಜ್ಞಾನಂ ನಾನ್ಯಥಾ ಸತ್ಯಮೀರಿತಂ ||"—"ಶ್ರೀಪರಮೇಶ್ವರನ ಮತ್ತು ಶ್ರೀಗುರುಗಳ ಪ್ರಸಾದದ ಮೂಲಕವಾಗಿ ವೇದಾಂತಮಹಾವಾಕ್ಯಗಳ ತಾತ್ಪರ್ಯಾರ್ಥದ ವಿಚಾರದಿಂದ ಲಭಿಸುವ, ಜೀವಬ್ರಹ್ಮೈಕ್ಯವಿಷಯಕವಾದ ಜ್ಞಾನದಿಂದಲೇ

ಮುಕ್ತಿಯು—ಇದು ಸತ್ಯವು"—ಎಂದು ವ್ಯಕ್ತವಾಗಿ ಉಪದೇಶಿಸಿದ್ದಾರೆ. ಇದರಿಂದ ಶ್ರೀವ್ಯಾಸರ ಅಭಿಮತವು ಕೇವಲಾದ್ವೈತಸಿದ್ಧಾಂತವೇ ಎಂಬುದು ಅವರ ಮಾತಿನಿಂದಲೇ ಇಲ್ಲಿ ಸ್ಪಷ್ಟವಾಗಿರುತ್ತದೆ.

ಇದೇ ರೀತಿಯಲ್ಲಿ ಇತರ ಎಲ್ಲ ಮುನಿಗಳಿಗೂ ಕೇವಲಾದ್ವೈತವೇ ಮುಖ್ಯವಾಗಿ ಸಮ್ಮತವಾಗಿರುವುದೆಂಬುದನ್ನು ಪುರಾಣವಚನಗಳಿಂದ ತಿಳಿಯಬಹುದು—ಗ್ರಂಥವಿಸ್ತರಭಯದಿಂದ ಇಲ್ಲಿ ವಿವರಿಸಲು ಸಾಧ್ಯವಾಗಿಲ್ಲ.

"ಈ ಮಹರ್ಷಿಗಳಿಗೆಲ್ಲರಿಗೂ ಕೇವಲಾದ್ವೈತವೇ ಸಮ್ಮತವಾಗಿದ್ದಿದ್ದರೆ, ಮತ್ತೆ ಇವರು ಬೇರೆಬೇರೆ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತ, ವ್ಯಾಸಾಭಿಮತವಾಗಿರುವ ಕೇವಲಾದ್ವೈತಸಿದ್ಧಾಂತವನ್ನು ನಿರಾಕರಿಸಿರುವುದು ಹೇಗೆ ಯುಕ್ತವು?"—ಎಂದರೆ; ಕೇವಲಾದ್ವೈತವೇ ತಮಗೆ ಸಮ್ಮತವಾಗಿದ್ದರೂ, ವೇದಾಂತವಿಚಾರಕ್ಕೆ ಅವಶ್ಯವಾಗಿರುವ ಪ್ರತಿವಾದಗಳನ್ನು ಪ್ರತಿಪಾದಿಸುವುದೇ ಅವರ ಉದ್ದೇಶವು. ಶ್ರೀಮದ್ವಾಲ್ಮೀಕಿರಾಮಾಯಣದ ಅಯೋಧ್ಯಾಕಾಂಡದಲ್ಲಿ ಶ್ರೀರಾಮಚಂದ್ರನನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಲು ಬಂದ ಭರತನ ಪ್ರಾರ್ಥನೆಯನ್ನು ಶ್ರೀರಾಮನು ನಿರಾಕರಿಸಲಾಗಿ, ಅತ್ಯಂತದುಃಖಿತನಾದ ಭರತನ ಪಕ್ಷವನ್ನು ವಹಿಸಿ, ಜಾಬಾಲಿಮಹರ್ಷಿಗಳು ನಾಸ್ತಿಕವಾದವನ್ನು ಅವಲಂಬಿಸಿ ಧರ್ಮಮಾರ್ಗವನ್ನು ನಿರಾಕರಿಸಿದರು; ಇಲ್ಲಿ ಆಸ್ತಿಕರಾಗಿದ್ದ ಜಾಬಾಲಿಗಳಿಗೆ ನಾಸ್ತಿಕಪಕ್ಷಸ್ಥಾಪನೆಯಲ್ಲಿ ತಾತ್ಪರ್ಯವಿಲ್ಲವಾದರೂ, ಭರತನ ಸಮಾಧಾನಕ್ಕಾಗಿ ಹೀಗೆ ಮಾಡಿದರು. ಇವರಿಗೆ ನಾಸ್ತಿಕಮತಸ್ಥಾಪನೆ ಧರ್ಮಮಾರ್ಗನಿರಾಕರಣೆಗಳಲ್ಲಿ ತಾತ್ಪರ್ಯವಿಲ್ಲವಾದರೂ, ಧರ್ಮಮಾರ್ಗದ ಅನುವಾದಾಂಶದಲ್ಲಿ ತಾತ್ಪರ್ಯವಿದ್ದೇ ಇರುತ್ತದೆ. ಇದರಂತೆ, ಕಪಿಲಕಣಾದಾದಿಗಳಿಗೂ ದ್ವೈತಸ್ಥಾಪನೆ–ಅದ್ವೈತನಿರಾಕರಣೆಗಳಲ್ಲಿ ತಾತ್ಪರ್ಯವಿರುವುದಿಲ್ಲವಾದರೂ, ಅದ್ವೈತಾನುವಾದಾಂಶದಲ್ಲಿ ತಾತ್ಪರ್ಯವಿರುತ್ತದೆ.

ಇಲ್ಲೊಂದು ವಿಶೇಷವನ್ನೂ ಗಮನಿಸತಕ್ಕದ್ದು. ಇತರಮತಗಳಲ್ಲಿ ವೇದಾಂತಮತವನ್ನು ಅನುವಾದಮಾಡಿ ನಿರಾಕರಿಸಿರುತ್ತಾರಷ್ಟೆ! ಇವರು ವೇದಾಂತಸಿದ್ಧಾಂತವನ್ನು ಯಥಾರ್ಥವಾಗಿ ಅನುವಾದಮಾಡದೆ, ತಮಗೆ ಖಂಡನೆಗೆ ಯೋಗ್ಯವಾಗುವಂತೆ ಅನುವಾದಮಾಡಿ ಖಂಡಿಸಿರುತ್ತಾರೆ. ವೇದಾಂತಸಿದ್ಧಾಂತವನ್ನು ಸರಿಯಾಗಿ ತಿಳಿದಿರುವವರಿಗೆ ಇದು ಸ್ಪಷ್ಟವೇ ಇದೆ.

ವೇದಾಂತಸಿದ್ಧಾಂತವನ್ನು ಸರಿಯಾಗಿ ತಿಳಿದರೆ ಅದನ್ನು ಖಂಡನೆಮಾಡುವುದು ಸಾಧ್ಯವೇ ಆಗುವುದಿಲ್ಲವಾಗಿ, ಈ ಖಂಡನೆಗಳು ಕೇವಲ ಖಂಡನಾಭಾಸಗಳೇ ಆಗಿವೆ. ಆದರೆ, ವೇದಾಂತಸಿದ್ಧಾಂತಪ್ರತಿಪಾದಕಗಳಾಗಿರುವ ಶ್ರೀಬ್ರಹ್ಮಸೂತ್ರಗಳಲ್ಲಿ, ಇತರ ಮತಗಳ ಅನುವಾದವು, ಆಯಾಮತಗಳ ಯಥಾರ್ಥವೇ ಆಗಿರುತ್ತ, ಅದರ ನಿರಾಕರಣೆಯೂ ಸಮಂಜಸವೇ ಆಗಿರುತ್ತದೆ.

ಇದಲ್ಲದೆ, ಆಸ್ತಿಕನಾಸ್ತಿಕತಾಂತ್ರಿಕ—ಎಲ್ಲ ಮತಗಳೂ ಕ್ರಮವಾಗಿ ವೇದಾಂತಸಿದ್ಧಾಂತಕ್ಕೆ ಅನುಗುಣಗಳೇ ಆಗಿರುತ್ತ, ಅಲ್ಲಿಯೇ ಪರ್ಯವಸಾನವನ್ನು ಹೊಂದುತ್ತವೆಂಬುದನ್ನು ಶ್ರೀವಿದ್ಯಾರಣ್ಯಗುರುಗಳು ಶ್ರೀಮಧುಸೂದನಸರಸ್ವತಿಗಳು—ಮುಂತಾದವರು ವಿವರಿಸಿರುತ್ತಾರಾಗಿ, ಯಾವ ವಿರೋಧಕ್ಕೂ ಅವಕಾಶವಿರುವುದಿಲ್ಲ.

ಇವೆಲ್ಲವನ್ನೂ ಶ್ರೀಮತ್ಸೂತಸಂಹಿತೆಯ ಯಜ್ಞವೈಭವಖಂಡದ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ವಿಶದವಾಗಿ ಹೇಳಿರುತ್ತದೆ. ಇದು, ಸಂಗ್ರಹವಾಗಿ ಹೀಗಿದೆ—"ಈಗ ಮಾರ್ಗಪ್ರಾಮಾಣ್ಯದ ನಿರ್ಣಯವನ್ನು ಹೇಳುತ್ತೇವೆ—ಶ್ರದ್ಧೆಯಿಂದ ಕೇಳಿ ತಿಳಿದುಕೊಂಡು ನಡೆಯಿರಿ. ವೇದಗಳನ್ನೂ, ಧರ್ಮಶಾಸ್ತ್ರಗಳನ್ನೂ, ಪುರಾಣಗಳನ್ನೂ, ಭಾರತವನ್ನೂ, ವೇದಾಂಗಗಳನ್ನೂ, ಕಾಮಿಕವೊದಲಾದ ಆಗಮಗಳನ್ನೂ, ಹಾಗೆಯೇ ಕಾಪಾಲ, ವಾತುಲ—ಮುಂತಾದ ಅವುಗಳ ಭೇದಗಳನ್ನೂ, ಪಾಶುಪತ, ಸೋಮ, ಭೈರವ—ಮುಂತಾದ ಆಗಮಗಳನ್ನೂ, ಇವುಗಳ ಹಲವಾರು ಭೇದಗಳನ್ನೂ, ವೈಷ್ಣವ, ಬ್ರಾಹ್ಮ, ಬೌದ್ಧ, ಜೈನ, ಲೋಕಾಯತ, ತರ್ಕಶಾಸ್ತ್ರ, ಮೀಮಾಂಸಾಶಾಸ್ತ್ರ, ಸಾಂಖ್ಯ, ಯೋಗ—ಇವೇ ಮೊದಲಾದ, ಜಗತ್ತಿನಲ್ಲಿ ಪ್ರಸಿದ್ಧವಾದ ಸಕಲಶಾಸ್ತ್ರಗಳನ್ನೂ, ಸಾಕ್ಷಾಚ್ಛ್ರೀಪರಮೇಶ್ವರನೇ ಪ್ರಚಾರಮಾಡಿರುವನು. ಬ್ರಹ್ಮಾ, ವಿಷ್ಣು—ಮೊದಲಾದವರು ಶ್ರೀಪರಶಿವನ ಅನುಗ್ರಹವನ್ನು ಪಡೆದು, ಆತನ ಆಜ್ಞೆಯಂತೆ, ಆಯಾ ಅಧಿಕಾರಿಗಳ ಅನುಕೂಲಕ್ಕಾಗಿ, ಇವುಗಳನ್ನು ಸಂಗ್ರಹವಾಗಿಯೂ ವಿಸ್ತರವಾಗಿಯೂ ಲೋಕದಲ್ಲಿ ಪ್ರಚಾರಮಾಡಿರುತ್ತಾರೆ. ಆದ್ದರಿಂದ ಇವೆಲ್ಲವೂ ಪ್ರಾಮಾಣಿಕಗಳೆಂಬಲ್ಲಿ ಸಂದೇಹವಿಲ್ಲ. ಆದರೆ, ಆಯಾ ಅಧಿಕಾರಿಗಳಿಗೆ ಮಾತ್ರವೇ ಆಯಾಮತಗಳು ಶ್ರೇಯಸ್ಕರಗಳೇ ಹೊರತು,—ಯಾರಿಗೆ ಯಾವುದಾದರೂ ಆಗಲಿ—ಎಂದು ಆಗುವುದಿಲ್ಲ. ಆದ್ದರಿಂದ ಈ

ಮತಗಳನ್ನು ಯಾವುದನ್ನೂ ತರ್ಕದಿಂದ ಖಂಡನೆಮಾಡದೆ, ಅವರವರು ಅವರವರ ಮತಧರ್ಮಗಳ ನಿಯಮಗಳಲ್ಲಿ ಇರುವಂತೆ ಅನುಕೂಲವಾಗಿ ತಕ್ಕದ್ದು. ಭೂಮಿಯ ಮೇಲೆ ಬೀಳುವ ನೀರುಗಳಿಗೆಲ್ಲ, ಆಯಾ ನದಿಗಳ ಮೂಲಕವಾಗಿ, ಸಮುದ್ರವೇ ಪರಾಗತಿಯಾಗಿರುವಂತೆ, ಎಲ್ಲ ಮತಗಳಿಗೂ, ಕ್ರಮವಾಗಿ, ವೈದಿಕಾದ್ವೈತಮತದ ಮೂಲಕವಾಗಿ, ಪರಮಾತ್ಮಪ್ರಾಪ್ತಿಯೇ ಪರಮಫಲವಾಗಿರುತ್ತದೆ. ಆಯಾಮತಗಳಲ್ಲಿ ಶ್ರದ್ಧೆಯಿಂದ ನಿರತರಾಗಿರುವವರನ್ನು ಶ್ರೀಪರಮೇಶ್ವರನು ಆಯಾರೂಪದಲ್ಲಿದ್ದು ಅನುಗ್ರಹಮಾಡಿ ಅವರನ್ನು ಕ್ರಮಕ್ರಮವಾಗಿ ಸರ್ವೋತ್ತಮವಾದ ವೈದಿಕಮಾರ್ಗಕ್ಕೆ ಕರೆತರುತ್ತಾನೆ. ವೇದಾಂತಮಾರ್ಗದಲ್ಲಿರುವವವರಿಗೆ ಸಾಕ್ಷಾತ್ತಾಗಿಯೇ ಮೋಕ್ಷವು ಸಿದ್ಧಿಸುವುದು. ವೈದಿಕನಿಷ್ಕಾಮಕರ್ಮಮಾರ್ಗದಲ್ಲಿ ನಿರತರಾಗಿರುವವರಿಗೆ ಈಶ್ವರನು ಚಿತ್ತಶುದ್ಧಿಯ ಮೂಲಕವಾಗಿ ಜ್ಞಾನದಲ್ಲಿ ಶ್ರದ್ಧೆಯನ್ನು ಅನುಗ್ರಹಿಸುವನು. ಜ್ಞಾನನಿಷ್ಠರಾದವರಿಗೆ ತತ್ತ್ವಾನುಭವದಿಂದ ಮೋಕ್ಷವು ಸಿದ್ಧಿಸುವುದು. ಮೋಕ್ಷವು ತಾರತಮ್ಯರಹಿತವಾಗಿ ಒಂದೇ ವಿಧವಾದದ್ದು; ಆದಕಾರಣ, ಇದಕ್ಕೆ ಸಾಧನವಾದ ಜ್ಞಾನವೂ ಒಂದೇ ರೂಪವಾದದ್ದು. ವೇದಾಂತಗಳೇ ಈ ತತ್ತ್ವವನ್ನು ಪ್ರತಿಪಾದಿಸುತ್ತವೆಯೇ ಹೊರತು, ಇತರ ಮಾರ್ಗಗಳು ಹೀಗೆ ಹೇಳುವುದಿಲ್ಲ. ಆದಕಾರಣ, ವಿದ್ಯೆಯು ವೇದಗಳಿಂದಲೇ ತಿಳಿದುಬರುವುದು; ಇತರ ಮಾರ್ಗಗಳಿಂದ ತಿಳಿದುಬರುವುದು ವಿದ್ಯೆಯೇ ಅಲ್ಲ —ಅದು ಅವಿದ್ಯೆಯೇ ಸರಿ. ಈ ಕಾರಣದಿಂದ, ಇತರಮಾರ್ಗಗಳು ಮುಕ್ತಿಗೆ ಸಾಧಕಗಳಲ್ಲ. ವೇದಮಾರ್ಗಸ್ಥನು ಇತರಮಾರ್ಗಗಳನ್ನು ಆಶ್ರಯಿಸಬಾರದು. ವೇದನಿಷ್ಠನಾದವನಿಗೆ ಇಲ್ಲಿಯೇ ಈಗಲೇ ಮುಕ್ತಿಯು ಹಸ್ತಗತವಾಗುವುದು. ಇತರಮಾರ್ಗಗಳು ಕ್ರಮವಾಗಿ ಮುಕ್ತಿಗೆ ಕಾರಣಗಳಾಗುವುವು—ಇವು ಮಂದಮತಿಗಳಿಗೆ ಉಪಯುಕ್ತವಾಗುವುವು. ಯಾವ ಮಾರ್ಗದಲ್ಲಿಯಾದರೂ ಮೊದಲು ಶ್ರದ್ಧೆಯನ್ನು ಹೊಂದಿರುವವನಿಗೆ, ಅಲ್ಲಿನ ದೋಷಗಳನ್ನು ತೋರಿಸಿಕೊಟ್ಟು, ಕ್ರಮವಾಗಿ ಅವನನ್ನು ಉತ್ತಮಮಾರ್ಗಗಳಿಗೆ ಕರೆತರುವುದು ಸಾಧ್ಯವಾಗುವುದು. ಯಾವಮಾರ್ಗದಲ್ಲಿಯೂ ಶ್ರದ್ಧೆಯಿಲ್ಲದವನನ್ನು ಉದ್ಧರಿಸುವುದು ಸಾಧ್ಯವೇ ಆಗುವುದಿಲ್ಲ. ಈ ಉದ್ದೇಶದಿಂದಲೇ ಪಾಮರ ಜನರ ಉದ್ಧಾರಕ್ಕಾಗಿ ಈ ಮತಗಳು ಪ್ರಚಾರವಾಗಿವೆ. ಪಾರಮಾರ್ಥಿಕವಾಗಿ

ನೋಡಿದಲ್ಲಿ, ಅವೈದಿಕಮತಗಳೆಲ್ಲವೂ ಭ್ರಾಂತಿಮತಗಳೇ ಸರಿ. ಹುಲ್ಲನ್ನು ತೋರಿಸಿ ಹಸುವನ್ನು ಕೊಟ್ಟಿಗೆಗೆ ಸೇರಿಸುವಂತೆ, ಪರಮಕಾರುಣಿಕನಾದ ಪರಮೇಶ್ವರನು ಸಕಲಲೋಕವನ್ನೂ ಈ ರೀತಿಯಲ್ಲಿ ಉದ್ಧರಿಸುತ್ತಿದ್ದಾನೆ. ಸಕಲಶಾಸ್ತ್ರಗಳ ಪ್ರಾಮಾಣ್ಯವನ್ನು ಈ ಪ್ರಕಾರವಾಗಿ ಪ್ರತಿಪಾದಿಸಿದ್ದಾಯಿತು. ಇದನ್ನು ಸರಿಯಾಗಿ ವಿಚಾರಮಾಡಿ ತಿಳಿದುಕೊಂಡು, ಎಲ್ಲರೂ ಶ್ರದ್ಧೆಯಿಂದ ವೇದದಲ್ಲಿ ನಂಬಿಕೆಯನ್ನಿಟ್ಟುಕೊಂಡು, ಸ್ವಧರ್ಮನಿರತರಾಗಿ, ಈಶ್ವರಾನುಗ್ರಹಕ್ಕೆ ಪಾತ್ರರಾಗಿ, ಶ್ರೇಯೋಭಾಗಿಗಳಾಗತಕ್ಕದ್ದು."

ದುರಿತವಿಶೇಷಗಳಿಂದ ಜನರಿಗೆ ಅತ್ಯಂತ ಅಯೋಗ್ಯವಿಷಯಗಳಲ್ಲಿಯೂ ಪರಮಾದರವು ಇರುವುದು,—'ಲೋಕೋ ಭಿನ್ನರುಚಿಃ'—ಎಂಬ ನ್ಯಾಯದಂತೆ, ಪ್ರಸಿದ್ಧವೇ ಇದೆ. ಅವುಗಳನ್ನು ಯಾವ ರೀತಿಯಲ್ಲಿಯೂ ಸರಿಯೆಂದು ಒಪ್ಪಲಾಗದು. ಪ್ರಾಮಾಣಿಕವಾದುದೊಂದೇ ಸಮಂಜಸವಾದುದು. ತಾತ್ವಿಕ ವಿಷಯದಲ್ಲಿ ವೇದವೊಂದೇ ಪ್ರಮಾಣವಾದ್ದರಿಂದ, ವೇದಬಾಹ್ಯಗಳೂ ವೇದ ವಿರುದ್ಧಗಳೂ ಆಗಿರುವ ಮತಗಳೆಲ್ಲ ಕೇವಲ ಭ್ರಾಂತಮತಗಳೆಂದೇ ನಿಶ್ಚಿತವಾಗುವುದು. ಹಿಂದೆ ತಿಳಿಸಿದಂತೆ, ಸರ್ವಜ್ಞರಾದ ಕಪಿಲಾದಿಗಳು—ತಾವು ಪ್ರತಿಪಾದಿಸಿರುವ ಮತಗಳಿಂದ ವೇದಾಂತವಿಚಾರಕ್ಕೆ ಬೇಕಾದ ಪೂರ್ವಪಕ್ಷಗಳನ್ನು ತೋರಿಸಿಕೊಟ್ಟಿರುವರೇ ಹೊರತು, ಆ ಮತಗಳಲ್ಲಿ ಅವರಿಗೆ ತಾತ್ಪರ್ಯವಿರುವುದಿಲ್ಲ. ಆದರೆ, ಆ ಮತಗಳ ಈಚಿನ ಅನುಯಾಯಿಗಳು, ಈ ರಹಸ್ಯವನ್ನು ತಿಳಿಯದೆ, ಅವುಗಳಲ್ಲಿಯೇ ಸಮ್ಯಗ್ದರ್ಶನವೆಂದು ಅಂಧಶ್ರದ್ಧೆಯುಳ್ಳವರಾಗಿರುತ್ತಾರೆ. ಇಂಥವರನ್ನು ಕುರಿತು ಅವುಗಳನ್ನು ಪ್ರಮಾಣಗಳೆಂದು ಹೇಳಿರುತ್ತದೆ. ವಾಸ್ತವವಾಗಿ ಅವೆಲ್ಲ ಭ್ರಾಂತಮತಗಳೇ ಸರಿ. ಪೂರ್ವಪಕ್ಷಿಯ ಅಭಿಪ್ರಾಯಗಳು ಎಂದಾದರೂ ಯಥಾರ್ಥವಾದೀತೆ? ಆದ್ದರಿಂದಲೇ ಶ್ರೀಭಗವತ್ಪಾದರವರು—ಆತ್ಮನಿಗೆ ಸಂಸಾರಧರ್ಮವಿಲ್ಲವೆಂಬುದನ್ನು ಶ್ರುತಿಪ್ರಾಮಾಣಿಕವಾಗಿ ಪ್ರತಿಪಾದಿಸಿ; ಅನಂತರ—"ಕಪಿಲಕಣಾದಾದಿತರ್ಕಶಾಸ್ತ್ರವಿರೋಧಃ—ಇತಿ ಚೇತ್? ನ; ತೇಷಾಂ ಮೂಲಾಭಾವೇ, ವೇದವಿರೋಧೇ ಚ, ಭ್ರಾಂತತ್ವೋಪಪತ್ತೇಃ। ಶ್ರುತ್ಯುಪಪತ್ತಿಭ್ಯಾಂ ಚ ಸಿದ್ಧಮಾತ್ಮನೋಽಸಂಸಾರಿತ್ವಂ, ಏಕತ್ವಾಚ್ಚ।"—(ತೈ. ಭಾ. ೩–೧೧)

"ಕಪಿಲಕಣಾದರೇ ಮೊದಲಾದವರ ತರ್ಕಶಾಸ್ತ್ರಗಳಿಗೆ ಈ ಅರ್ಥವು

ವಿರುದ್ಧವಾಗುವುದಲ್ಲವೆ?—ಎಂದರೆ, ಇಲ್ಲ; ಆ ಮತಗಳಿಗೆ ಮೂಲಪ್ರಮಾಣವಿಲ್ಲದೆ, ಕೇವಲ ಅವರ ಸ್ವತಂತ್ರತರ್ಕಗಳಿಂದ ಊಹಿಸಿದ ಅರ್ಥಗಳು ಅವು; ಆದ್ದರಿಂದ ವಾಸ್ತವವಾದ ಅರ್ಥದಲ್ಲಿ ಒಂದೇ ಪ್ರಮಾಣವಾಗಿರುವ ವೇದದ ತಾತ್ಪರ್ಯಾರ್ಥಕ್ಕೆ ವಿರುದ್ಧಗಳಾದ ಅವುಗಳು ಭ್ರಾಂತಿಗಳೆಂದೇ ನಿಶ್ಚಿತವು. ಆದ್ದರಿಂದ, ಶ್ರುತಿಯುಕ್ತಿಗಳ ಬಲದಿಂದ ಅದ್ವಿತೀಯನಾದ ಆತ್ಮನು ಅಸಂಸಾರಿಬ್ರಹ್ಮಸ್ವರೂಪನೆಂಬುದೇ ಯಥಾರ್ಥವೆಂದು ಸಿದ್ಧವು"—ಎಂದು ಘಂಟಾಘೋಷವಾಗಿ ಉದ್ಘೋಷಿಸಿದ್ದಾರೆ.

ಇತರ ಮತದವರಿಗೂ, ಅವರವರ ಮತಗಳಲ್ಲಿ ಪ್ರಸಿದ್ಧಗಳಾಗಿರುವ ಪ್ರಮಾಣಗಳು ಇವೆಯಲ್ಲ?—ಎಂಬ ಮಂದರ ಆಶಂಕೆಗೆ ಶ್ರೀಭಗವತ್ಪಾದರು —"ಪರಸ್ಯಾಪಿ ಸರ್ವಜ್ಞಪ್ರಣೀತಾಗಮಸದ್ಭಾವಾತ್ಸಮಾನಮಾಗಮಬಲಮಿತಿ ಚೇತ್? ನ; ಇತರೇತರಾಶ್ರಯತ್ವಪ್ರಸಂಗಾತ್—ಆಗಮಪ್ರತ್ಯಯಾತ್ಸರ್ವಜ್ಞಸಿದ್ಧಿಃ, ಸರ್ವಜ್ಞಪ್ರತ್ಯಯಾಚ್ಚಾಗಮಸಿದ್ಧಿಃ,—ಇತಿ ।........ಏವಂ ವೇದಬಾಹ್ಯಾಸು ಕಲ್ಪನಾಸು ಅಸಾಮಂಜಸ್ಯಂ ಯೋಜಯಿತವ್ಯಂ ॥"

(ಸೂ. ಭಾ. ೨-೨-೩೮)

"ಮತಾಂತರದವರಿಗೂ ಸರ್ವಜ್ಞರು ರಚಿಸಿರುವ ಆಗಮಗಳಿರುವುದರಿಂದ, ಆಗಮಪ್ರಮಾಣದ ಬಲವು ಅವರಿಗೂ ಸಮಾನವೇ ಅಲ್ಲವೆ?"—ಎಂದರೆ, ಹಾಗಲ್ಲ; ಅವರು ರಚಿಸಿರುವ ಆಗಮವು ಪ್ರಾಮಾಣಿಕವೆಂದು ನಿಶ್ಚಿತವಾದಮೇಲೆ, ಅವರು ಸರ್ವಜ್ಞರೆಂದಾಗುವುದು; ಅವರು ಸರ್ವಜ್ಞರೆಂದು ನಿಶ್ಚಿತವಾದಮೇಲೆ ಅವರ ಆಗಮವು ಪ್ರಾಮಾಣಿಕವೆಂದಾಗುವುದು—ಎಂದು ಅನ್ಯೋನ್ಯಾಶ್ರಯದೋಷದಿಂದ, ಇದು ಯಾವುದೂ ಸಿದ್ಧಿಸದೆ ಹೋಗುವುದು. ವೇದವು ಅಪೌರುಷೇಯವಾಗಿ, ಅದರಲ್ಲಿ ಯಾವ ದೋಷಕ್ಕೂ ಅವಕಾಶವಿಲ್ಲದೆ ಸ್ವತಂತ್ರವಾಗಿಯೇ ಪರಮಪ್ರಮಾಣವಾಗಿರುವುದರಿಂದ, ಯುಕ್ತಿ ಮತ್ತು ವಿದ್ವದನುಭವಗಳ ಬಲದಿಂದ ವೈದಿಕಾರ್ಥವೇ ಯಥಾರ್ಥವೆಂದು ಸರ್ವಸಿದ್ಧವಾಗುವುದು. ವೇದಬಾಹ್ಯಮತಗಳೆಲ್ಲವೂ ಅಸಮಂಜಸಗಳೆಂಬುದನ್ನು ಹೀಗೆಯೇ ತಿಳಿಯತಕ್ಕದ್ದು"—ಎಂದು ಸ್ಥಾಪಿಸಿರುತ್ತಾರೆ.

ಈ ಪ್ರಕಾರವಾಗಿ ಎಲ್ಲ ಶ್ರುತಿಸೂತ್ರಸ್ಮೃತೀತಿಹಾಸಪುರಾಣಾಗಮ

ತಂತ್ರಗಳ ಪ್ರಮಾಣಾನುಸಾರವಾಗಿ, ಕೇವಲಾದ್ವೈತಸಿದ್ಧಾಂತವೇ ಶ್ರೀಬಾದರಾಯಣವ್ಯಾಸರಿಗೆ ತಾತ್ಪರ್ಯಾರ್ಥವೆಂದು ವ್ಯಕ್ತವಾಗಿರುವುದರಿಂದ, ಅಂಥ ಅದ್ವೈತವೇ ಪರಮಾರ್ಥತತ್ತ್ವವೆಂದು ಸರ್ವಸಿದ್ಧವು.

ಇಲ್ಲಿಗೆ, ಶ್ರೀಮದ್ವೇದಾಂತಸಿದ್ಧಾಂತರಹಸ್ಯಾರ್ಥಪ್ರಕಾಶನಧುರಂಧರರಾದ ಶ್ರೀಮದಯ್ಯಣ್ಣದೀಕ್ಷಿತರು ರಚಿಸಿರುವ ವ್ಯಾಸತಾತ್ಪರ್ಯನಿರ್ಣಯದಲ್ಲಿ ಶೃಂಗಗಿರಿಕವಿ ನರಸಿಂಹಶರ್ಮರ ಕನ್ನಡತಾತ್ಪರ್ಯಾನುವಾದದ ಮೊದಲನೆಯ ಪರಿಚ್ಛೇದವು ಸಮಾಪ್ತವು.

---